ಉಪನ್ಯಾಸ ಗ್ರಂಥಮಾಲೆ

೪೯

# ಕರ್ನಾಟಕದಲ್ಲಿ ಗ್ರಂಥಾಲಯಗಳು

ಶ್ರೀ ಎಸ್. ಆರ್. ಗುಂಜಾಳ

ಎಂ.ಎ., ಎಂ.ಲಿಬ್.ಎಸ್‌ಸಿ.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಕ್ಟೋಬರ, ೧೯೬೯

# ಉಪನ್ಯಾಸ ಗ್ರಂಥಮಾಲೆ

೧. ಭವಭೂತಿ (ದ್ವಿತೀಯ ಆವೃತ್ತಿ) –ಕೆ. ಕೃಷ್ಣಮೂರ್ತಿ
೨. ಮನೋರೋಗಗಳು (ತೃ.ಆ. ) –ಎನ್. ಆರ್. ಕುಲಕರ್ಣಿ
೩. ಪ್ರಥಮ ಪಂಚವಾರ್ಷಿಕ ಯೋಜನೆ
ಹಾಗೂ ಒಕ್ಕಲುತನ –ಎಸ್. ಪಿ. ಪಾಟೀಲ
೪. ಗಾದೆಗಳು (ದ್ವಿ. ಆ. ) –ಎ. ಕೆ. ರಾಮಾನುಜನ್
೫. ಭಾರತದಲ್ಲಿ ಜಾತಿ ಪದ್ಧತಿ (ದ್ವಿ. ಆ.) –ವ್ಹಿ. ಎಸ್. ಡಿ'ಸೋಜಾ
೬. ಕೀಟಕ ಪಿಡುಗುಗಳ ಸಮೀಕ್ಷಣೆ (ದ್ವಿ. ಆ.)
–ಎಸ್. ಎಸ್. ಕಟಗಿಹಳ್ಳಿಮಠ
೭. ರಾಜಕೀಯ ಪಕ್ಷಗಳು (ದ್ವಿ. ಆ.) –ಎನ್. ರಾಜಗೋಪಾಲರಾವ್
೮. ಸ್ವಾದಿ ಅರಸುಮನೆತನ ( ,, ) –ಎಸ್. ಎಸ್. ಮಾಳವಾಡ
೯. ಮಕ್ಕಳ ಶಿಕ್ಷಣ (ತೃ.ಆ.) –ಡಿ. ಎಸ್. ಕರ್ಕಿ
೧೦. ಮೂಢ ನಂಬಿಕೆಗಳು ( ,, ) –ಎಲ್. ಆರ್. ಹೆಗಡೆ
೧೧. ಸಂಸ್ಕೃತ ಕವಯಿತ್ರಿಯರು (ದ್ವಿ. ಆ.) –ಕೆ. ಟಿ. ಪಾಂಡುರಂಗಿ
೧೨. ನಿತ್ಯಜೀವನದಲ್ಲಿ ರಸಾಯನಶಾಸ್ತ್ರ (,,) –ಬಿ. ವಿರೂಪಾಕ್ಷಪ್ಪ
೧೩. ಸಾರ್ವಜನಿಕ ಆಡಳಿತ (ದ್ವಿ. ಆ.) –ಜಿ. ಎಸ್. ಹಾಲಪ್ಪ
೧೪. ವಿಚಾರವಾದ ( ,, ) –ಗೌರೀಶ ಕೈಕಿಣಿ
೧೫. ಮಹಾಕವಿ ಮಿಲ್ಟನ್ ( ,, ) –ಜಿ. ಎಸ್. ಆಮೂರ
೧೬. ಭಾರತದಲ್ಲಿ ಗ್ರಂಥಾಲಯ ಪ್ರಸಾರ (,,) –ಕೆ. ಎಸ್. ದೇಶಪಾಂಡೆ
೧೭. ಭಾರತೀಯ ನಾಗರಿಕತೆಗೆ ಮನುವಿನ
ಕೊಡುಗೆ (ದ್ವಿ. ಆ.) –ಬಿ. ಎಚ್. ಶ್ರೀಧರ
೧೮. ಜನಸಂಖ್ಯೆ ಹಾಗು ಆಹಾರ ಸಮಸ್ಯೆ
–ಪಿ. ಎಂ. ಉಮಾಕಾಂತಶಾಸ್ತ್ರಿ
೧೯. ಸೌರವ್ಯೂಹ (ದ್ವಿ. ಆ.) –ಸಿ. ಎನ್. ಶ್ರೀನಿವಾಸ ಅಯ್ಯಂಗಾರ
೨೦. ಪ್ರಾಚೀನ ಭಾರತದಲ್ಲಿ ಸಾಮಾಜಿಕ
ಜನಜೀವನ (ದ್ವಿ. ಆ.) –ಸಿ. ವ್ಹಿ. ರಂಗಸ್ವಾಮಿ
೨೧. ಸಮಾಜ ಕಾರ್ಯ (ದ್ವಿ. ಆ.) –ಎಚ್. ಎಂ. ಮರುಳಸಿದ್ಧಯ್ಯ
೨೨. ಸಂಸತ್ತಿನ ಕಾರ್ಯಪದ್ಧತಿ (,,) –ಎ. ಎಂ. ರಾಜಶೇಖರಯ್ಯ
೨೩. ಕನ್ನಡನಾಡಿನ ಶಾಸನಗಳು (ದ್ವಿ. ಆ.) –ಪಿ. ಬಿ. ದೇಸಾಯಿ
೨೪. ಕವೀಂದ್ರ ರವೀಂದ್ರರು ( ,, ) –ಎಸ್. ಎಸ್. ಮಾಳವಾಡ
೨೫. ನಾಗಾನಂದ ( ,, ) –ಎಚ್. ಪಿ. ಮಲ್ಲೇದೇವರು
೨೬. ಜೀವನದಲ್ಲಿ ನಗೆ ( ,, ) –ಎಂ. ಎಸ್. ಸುಂಕಾಪುರ
೨೭. ಬಸವಣ್ಣನವರ ಯೋಜನೆಗಳು ( ,, ) –ಬಿ. ಸಿ. ಜವಳಿ
೨೮. ೧೮೫೭ರ ಕ್ರಾಂತಿ ( ,, ) –ಸಿ. ವೀರಬಸಣ್ಣ
೨೯. ಕನ್ನಡ ಕಥಾಸೃಷ್ಟಿ (ದ್ವಿ. ಆ.) –ಬಿ. ಬಿ. ಮಹೀಶವಾಡಿ
೩೦. ಸಂಸ್ಕೃತ ಸಾಹಿತ್ಯದಲ್ಲಿ ಶೃಂಗಾರರಸ (ದ್ವಿ. ಆ.)
–ಕೆ. ಕೃಷ್ಣಮೂರ್ತಿ
೩೧. ನೀರಾವರಿ ಬೇಸಾಯ –ಎಸ್. ಎ. ಹೊಸಮನಿ

# ಕರ್ನಾಟಕದಲ್ಲಿ ಗ್ರಂಥಾಲಯಗಳು



ಉಪನ್ಯಾಸ ಗ್ರಂಥಮಾಲೆ

೮೯

# ಕರ್ನಾಟಕದಲ್ಲಿ ಗ್ರಂಥಾಲಯಗಳು

ಶ್ರೀ ಎಸ್. ಆರ್. ಗುಂಜಾಳ

ಎಂ.ಎ.,ಎಂ.ಲಿಬ್.ಎಸ್‌ಸಿ.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಅಕ್ಟೋಬರ, ೧೯೬೯

ಪ್ರಕಾಶಕರು :

**ಎಸ್. ಎಸ್. ಒಡೆಯರ,** ಎಂ. ಎ., ಎಲ್‌ಎಲ್. ಬಿ.
ರಜಿಸ್ಟ್ರಾರ್,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ ಅಕ್ಟೋಬರ ೧೯೬೯ (೫೦೦೦ ಪ್ರತಿಗಳು)



ಬೆಲೆ : ೨೫ ಪೈಸೆ

ಮುದ್ರಕರು:
ಸಂಗಮ ಮುದ್ರಣಾಲಯ,
ಸಾಧನಕೇರಿ, ಧಾರವಾಡ

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ವೊದಗುವುದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ಎಂಬತ್ತೆಂಟು ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯು ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಧಾರವಾಡ-೩ ಕುಲಪತಿ
೧೭-೯-೧೯೬೯ ಕರ್ನಾಟಕ ವಿಶ್ವವಿದ್ಯಾಲಯ

# ನನ್ನ ನುಡಿ

ಕರ್ನಾಟಕವು ವಿದ್ವತ್ತಿಗೆ ಬಹು ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿದೆ. ವಿದ್ಯಾಭಿವೃದ್ಧಿ ಕಾರ್ಯದಲ್ಲಿ ಪೂರಕವಾದ ಗ್ರಂಥಾಲಯಗಳು ಆಗಿನಿಂದಲೇ ನಮ್ಮ ನಾಡಿನಲ್ಲಿ ಸುವ್ಯವಸ್ಥಿತವಾಗಿ ಹಬ್ಬಿ ಹರಡಿರುವದನ್ನು ಈ ಪುಟ್ಟ ಗ್ರಂಥದಲ್ಲಿ ದಿಕ್‌ಸೂಚಿಯಾಗಿ ವಿವರಿಸಿದ್ದೇನೆ. ಈ ದಿಶೆಯಲ್ಲಿ ಸಂಶೋಧನೆ ನಡೆಸಿದರೆ ಇನ್ನೂ ಮಹತ್ವದ ಐತಿಹಾಸಿಕ ಅಂಶಗಳು ಸಿಗಬಹುದೆಂಬ ಭರವಸೆ ನನಗಿದೆ. ಭಾರತೀಯ ಗ್ರಂಥಾಲಯ ಚಳುವಳಿಯಲ್ಲಿ ಕರ್ನಾಟಕವು ವಿಶಿಷ್ಟವಾದ ಪಾತ್ರ ವಹಿಸಿದುದನ್ನು ಈ ಗ್ರಂಥಾವಲೋಕನದಿಂದ ಓದುಗರು ಅರಿಯಬಹುದು.

ಭಾರತದಲ್ಲಿ ಪ್ರಜಾಪ್ರಭುತ್ವದ ತತ್ವಗಳ ಆಧಾರದ ಮೇಲೆ ಸಾರ್ವಜನಿಕ ಗ್ರಂಥಾಲಯವನ್ನು ಮೊಟ್ಟಮೊದಲು ಪ್ರಾರಂಭಿಸಿದ ಕೀರ್ತಿ ಕರ್ನಾಟಕಕ್ಕೆ ಸಲ್ಲುವದು ಎಂಬ ಹೊಸ ಮಾತನ್ನು ಇದರಲ್ಲಿ ವಿವರಿಸಲೆತ್ನಿಸಿದ್ದೇನೆ. ಈ ಅಭಿಪ್ರಾಯದಲ್ಲಿ ನನಗೆ ನಂಬಿಗೆಯೂ ಇದೆ, ಪ್ರಬಲ ಆಧಾರಗಳೂ ಇವೆ.

ಇದನ್ನು ಬರೆಯುವಲ್ಲಿ ಕೆಲವು ಮಹತ್ವದ ಅಂಕಿ-ಅಂಶಗಳನ್ನು 'ಸಂದರ್ಭಗ್ರಂಥಸೂಚಿ'ಯಲ್ಲಿ ಕಾಣಿಸಿದ ಶ್ರೀ ಕೆ. ಎಸ್. ದೇಶಪಾಂಡೆಯವರ ಗ್ರಂಥ ಹಾಗೂ ಲೇಖನಗಳಿಂದ ಎತ್ತಿ

ಕೊಂಡಿರುವೆ. ಅಲ್ಲದೆ ಅವರು ಗ್ರಂಥ ರಚನೆಯಲ್ಲಿ ಸಲಹೆ-ಸೂಚನೆಗಳನ್ನಿತ್ತಿರುವರು. ಅದಕ್ಕಾಗಿ ನಾನು ಉಪಕೃತ. ಗ್ರಂಥ ರೂಪಗೊಳ್ಳುವಲ್ಲಿ ಅನೇಕ ರೀತಿಯಲ್ಲಿ ಪ್ರೋತ್ಸಾಹ ನೀಡಿದ ಶ್ರೀ ಚೆನ್ನವೀರ ಕಣವಿ ಅವರಿಗೆ ನನ್ನ ನೆನಕೆಗಳು. ಮೊರಬ ಗ್ರಾಮದಲ್ಲಿ ದಿನಾಂಕ ೧೯-೩-೬೬ರಂದು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಸಮಿತಿಯ ೯೫ನೆಯ ಉಪನ್ಯಾಸ ಶಿಬಿರದಲ್ಲಿ ಭಾಷಣ ಮಾಡುವ ಅವಕಾಶವನ್ನು ಕಲ್ಪಿಸಿ, ಭಾಷಣವು ಗ್ರಂಥರೂಪದಲ್ಲಿ ಈಗ ಬೆಳಕು ಕಾಣಲು ಕಾರಣರಾದ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನಾನು ಚಿರಋಣಿಯಾಗಿದ್ದೇನೆ.

ಗ್ರಂಥಾಲಯ ವಿಜ್ಞಾನ ಪ್ರಕಾಶನ
ಧಾರವಾಡ

ಎಸ್. ಆರ್. ಗುಂಜಾಳ

ಅಕ್ಟೋಬರ ೨,೧೯೬೯

# ಅನುಕ್ರಮಣಿಕೆ

# ೧. ಗ್ರಂಥ-ಗ್ರಂಥಾಲಯ

## ಗ್ರಂಥ

ಜೀವನದಲ್ಲಿ ಮಾನವನು ಸುಖ-ದುಃಖ, ಹಾನಿ-ವೃದ್ಧಿ, ಜಯ-ಅಪಜಯಗಳನ್ನು ಅನುಭವಿಸುತ್ತಾನೆ. ಅವನ ಮನಸ್ಸು-ಹೃದಯ-ಬುದ್ಧಿಗಳು ಜೀವನದ ಪ್ರತಿಯೊಂದು ಘಟನೆಯಿಂದ ಒಂದಿಲ್ಲೊಂದು ಪಾಠವನ್ನು ಕಲಿಸುತ್ತವೆ. ಈ ಅನುಭವ ವೇದ್ಯವಾದ ಪಾಠವನ್ನು ಬಾಯಿಬಿಟ್ಟು ಪರರಿಗೆ ತಿಳಿಸಲೆತ್ನಿಸಿದಾಗ ಭಾಷೆ ಆವಿರ್ಭವಿಸುತ್ತದೆ. ಭಾಷೆಯಲ್ಲಿ ಪ್ರಕಟಿಸಿದ ಇಂದಿನ ನಮ್ಮ ಅನುಭವ ಸಂಶೋಧನೆಗಳು ಮುಂದಿನ ಜನಾಂಗಕ್ಕೆ ಉಪಯೋಗವಾಗಬೇಕೆಂದಿದ್ದರೆ ಅವುಗಳನ್ನು ಹಿಡಿದಿಟ್ಟುಕೊಳ್ಳುವ ಸಾಧನೆ ಬೇಡವೆ ? ಆ ಸಾಧನೆಯೆ ಲಿಪಿ, ಅಕ್ಷರ, ಬರಹ. ಹಿಂದಿನವರು ಇಂದಿನವರಿಗಾಗಿ, ಇಂದಿನವರು ಮುಂದಿನವರಿಗಾಗಿ ತಾವು ಕಂಡುಂಡ ವಿಚಾರಗಳನ್ನು ತಮಗೆ ತಿಳಿದಿರುವ ಭಾಷೆಯ ಲಿಪಿಯಲ್ಲಿ ಬರೆದಿಡಹತ್ತಿದರು. ಹೀಗೆ ಬರೆದಿಟ್ಟುದುದೆ ಗ್ರಂಥ.

ಗ್ರಂಥದ ಶರೀರ ರಚನೆಯು ಕಾಲಾಂತರದಲ್ಲಿ ಅನೇಕ ಬದಲಾವಣೆಗಳನ್ನು ಹೊಂದುತ್ತ ಬಂದಿದೆ. ಲಿಪಿಯಲ್ಲಿಯೂ ವ್ಯತ್ಯಾಸ ಕಾಣಿಸಿಕೊಂಡಿದೆ. ಆದರೆ ಶಬ್ದಾರ್ಥದಲ್ಲಿ, ಭಾವಾರ್ಥ

ದಲ್ಲಿ ಬದಲಾವಣೆಯಾಗುವದು ಕ್ವಚಿತ. ಕಲ್ಲು-ಕಬ್ಬಿಣಗಳ ಕಂಬ ಗಳಲ್ಲಿ; ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳಿ, ಕಂಚು- ಮುಂತಾದ ಲೋಹಗಳ ತಗಡುಗಳಲ್ಲಿ; ಮಣ್ಣಿನ ಇಟ್ಟಂಗಿ, ಚರ್ಮದ ತುಂಡು, ಮರದ ಹಲಿಗೆ, ತಾಳಪ್ರೋಲೆ, ಭೂರ್ಜ ಪತ್ರ, ಕವಟು ಅರಿವೆ (ಕಡತ)-ಮುಂತಾದವುಗಳಲ್ಲಿ ಗ್ರಂಥ ಗಳು ರೂಪಗೊಂಡವು. ಇದೀಗ ಗ್ರಂಥಗಳ ಮುದ್ರಣಕ್ಕಾಗಿ ಕಾಗದವು ಬಹುವಾಗಿ ಬಳಕೆಯಲ್ಲಿದೆ. ಇಂದು ಹೆಚ್ಚಾಗಿ ಪ್ರಚಾರ ದಲ್ಲಿರುವದು ಕಾಗದದಲ್ಲಿ ಮುದ್ರಿತ ಗ್ರಂಥಗಳೇ. ವಿಜ್ಞಾನದ ಹೊಸ ಹೊಸ ಸಂಶೋಧನೆಗಳಿಂದಾಗಿ ಸೂಕ್ಷ್ಮಪತ್ರಕ (Micro-card), ಸೂಕ್ಷ್ಮ ಛಾಯಾ ಪತ್ರ (Micro-Film) ಗಳಲ್ಲಿ ಗ್ರಂಥಗಳು ಇತ್ತೀಚೆಗೆ ಪ್ರಕಟವಾಗಹತ್ತಿವೆ.

ಓದುಬಲ್ಲವರಿಗೆ ಜ್ಞಾನನಿಧಿಗಳಾದ ಈ ಗ್ರಂಥಗಳಿಂದ ಆಗುವ ಉಪಕಾರ ಅನುಪಮ, ಅಗಣಿತ. ಇವು ಗುರುಗಳಿಗೆ ಸಮಾನ. ಈ ಗುರುಗಳು ಆಸರ ಬೇಸರಗಳಿನ್ನದೆ ನಾವು ಕರೆ ದಲ್ಲಿ ಬಂದು ನಿರಪೇಕ್ಷ ಬುದ್ಧಿಯಿಂದ ವಿದ್ಯೆಯ ಗುಟ್ಟನ್ನು ಅರುಹುವರು. ತಮಗೆ ತಿಳಿದ ಸತ್ಯವನ್ನು ಬಿಚ್ಚು ಮನಸ್ಸಿ ನಿಂದ ಪ್ರಕಟವಾಗಿ ಹೇಳುವರು. ದೀನರು, ದರಿದ್ರರು, ಸ್ತ್ರೀಯರು, ಪುರುಷರು, ಚಿಕ್ಕವರು, ವಯಸ್ಕರು, ಮುದುಕರು, ಓದಬಲ್ಲವರೆಲ್ಲರೂ ಅವರ ದೃಷ್ಟಿಯಲ್ಲಿ ಸಮಾನಸ್ಕಂದರು. ಸದಾಕಾಲ ನಮ್ಮ ಕಲ್ಯಾಣವನ್ನೇ ಬಯಸುವ ಈ ಗ್ರಂಥಗುರು ಗಳ ಉಪಕಾರ ನೆನಿಕೆಗೆ ನಿಲುಕದು.

ಇಂತಹ ಜೀವನಾವಶ್ಯಕವಾದ ಗ್ರಂಥಗಳನ್ನು ಸಂಗ್ರಹಿ

ಸಿಟ್ಟ ಮನೆಯೇ ಗ್ರಂಥಾಲಯ. ಪ್ರಾಚೀನ ಕಾಲದಲ್ಲಿ ಇದರ ಉಪಯೋಗ ಭಾಗ್ಯ ಕೇವಲ ವಿಶಿಷ್ಟವರ್ಗದವರಿಗೆ ಮೀಸಲಾಗಿದ್ದು ಈಗ ಸಾರ್ವಜನಿಕವಾಗಿದೆ. ಜನಜಾಗೃತಿಯಲ್ಲಿ ಅದರ ಪಾತ್ರ ಹಿರಿದಾಗಿದೆ. ಹೀಗಾಗಿ ಗ್ರಂಥಾಲಯಕ್ಕೆ ಇಂದು ಹೊಸದೊಂದು ಅರ್ಥ ಬಂದಿದೆ.

## ಗ್ರಂಥಾಲಯ

ಗ್ರಂಥಾಲಯಕ್ಕೆ 'ಗ್ರಂಥ ಭಂಡಾರ' 'ಪುಸ್ತಕ ಭಂಡಾರ' ಎಂಬ ಪರ್ಯಾಯ ನಾಮಗಳೂ ಕನ್ನಡದಲ್ಲಿ ಉಂಟು. ಜನ ಬಳಿಕೆಯಲ್ಲಿರುವ ಮತ್ತೊಂದು ಶಬ್ದ 'ವಾಚನಾಲಯ'. ಇದು ಇಂಗ್ಲಿಷಿನಲ್ಲಿಯ Reading Room ಎಂಬ ಪದಕ್ಕೆ ಬಂದ ಭಾಷಾಂತರ. 'ವಾಚನಾಲಯ' ದಲ್ಲಿ ದಿನಪತ್ರಿಕೆ, ವಾರ ಪತ್ರಿಕೆ ಮಾಸಪತ್ರಿಕೆ– ಇತ್ಯಾದಿ ನಿಯತಕಾಲಿಕೆಗಳೇ ಹೆಚ್ಚು. ಗ್ರಂಥಗಳಿಗೆ ವಾಚನಾಲಯದಲ್ಲಿ ಗೌಣಸ್ಥಾನ. ಪತ್ರಿಕೆಗಳಿಗೆ ಅಗ್ರಸ್ಥಾನ. ಆದರೆ ಗ್ರಂಥಾಲಯದಲ್ಲಿ ಗ್ರಂಥ, ಪತ್ರಿಕೆ, ತಾಡ ವೋಲೆ, ಹಸ್ತಪ್ರತಿ, ಧ್ವನಿಮುದ್ರಿಕೆಗಳು-ಮುಂತಾದವುಗಳೆಲ್ಲಕ್ಕೂ ಮಹತ್ವದ ಸ್ಥಾನವಿರುತ್ತದೆ.

# ೨. ಕನ್ನಡ ಅರಸರು

## (೧) ಕನ್ನಡ ಅರಸರ ಕಾಲದಲ್ಲಿ

ಕರ್ನಾಟಕದ ಪ್ರಾಚೀನ ಇತಿಹಾಸವನ್ನು ಅಭ್ಯಾಸಿಸಿದವರಿಗೆ ಅದರ ಭಾಷೆ, ಸಂಸ್ಕೃತಿ, ಸಾಹಿತ್ಯ, ಶಿಲ್ಪ, ಕಲೆ, ಇತ್ಯಾದಿಗಳ ಹಿರಿಮೆ ಸ್ಪಷ್ಟವಾಗಿ ವಿಶಿಷ್ಟ ರೀತಿಯಲ್ಲಿ ಬೆಳೆದುಬಂದುದು ಒಡೆದು ತೋರುತ್ತದೆ. ಅಂದು ಕರ್ನಾಟಕವು ವಿದ್ಯಾಕೇಂದ್ರವಾಗಿತ್ತೆಂಬುದಕ್ಕೆ 'ಅಗ್ರಹಾರ' 'ಮಠ' 'ಮಂದಿರ' ಮತ್ತು 'ಘಟಿಕಾಸ್ಥಾನ' ಈ ಮೊದಲಾದ ವಿದ್ಯಾಪೀಠಗಳೇ ಸಾಕ್ಷಿ.

### (1) ಅಗ್ರಹಾರ

ಇವು ಪಂಡಿತರ, ವಿದ್ಯಾವಂತರ, ವಾಸಸ್ಥಾನಗಳಾಗಿದ್ದವು. ಈ ಪ್ರಜ್ಞಾವಂತರಿಗೆ "ಮಹಾಜನ"ರೆಂದು ಹೆಸರು.

" ಕುಜಿತ ಕುಂಟೆಯ (ಕುರ್ತಕೋಟಿ, ಧಾರವಾಡ ಜಿಲ್ಲೆ) ೨೦೦ ಮಹಾಜನರು... ಅನೇಕ ಗುಣ ಗಣಾಂಕಿತ ಮುಖಕಮಳ ವಿನಿರ್ಗತ ವೇದವೇದಾಂಗೋಪಾಂಗಾನೇಕ ಶಾಸ್ತ್ರಾಷ್ಟಾದಶ ಸ್ಮೃತಿ ಪುರಾಣ ವಾಗ್ಭೂಷಣರ್ ವಿದಿತ ವೇದಾರ್ಥ ವಿದ್ಯಾಪಾರಗರ್ ಷಟ್ಕರ್ಮ ನಿರತರ್ " ಆಗಿದ್ದರು.

ಕುಪ್ಪತ್ತೂರು ಅಗ್ರಹಾರದ ಹಿರಿಯರು ಯಮ, ನಿಯಮ, ಧ್ಯಾನ, ಧಾರಣ, ಜಪ, ಮೌನ ಸ್ವಾಧ್ಯಾಯ, ಮತ್ತು

ಸಮಾಧಿಗಳಲ್ಲಿ ಪರಿಣಿತರಾಗಿದ್ದರು. ನಾಲ್ಕು ವೇದ, ಹದಿನೆಂಟು ಪುರಾಣ, ಸ್ಮೃತಿ, ಸಂಗೀತ, ಭಾಷೆ, ವ್ಯಾಕರಣ, ನಾಟಕ, ವೈದ್ಯ, ವಿಜ್ಞಾನ ಇತ್ಯಾದಿಗಳನ್ನು ಬಲ್ಲವರಾಗಿದ್ದರು.

ವಿಜಾಪೂರ (ಕಿ.ಶ. ೯೬೫-೧೦೭೫) ಬೇಲೂರು (ಕಿ.ಶ. ೧೦೭೭) ಸೊರಟೂರು (ಕಿ. ಶ. ೯೬೫) ಹೆಬ್ಬಾಳ (ಕಿ. ಶ. ೧೦೮೪) ಡಂಬಳ (ಕಿ. ಶ. ೧೧೦೦) ಪೇರೂರು, ನರಗುಂದ, ಬೇಗೂರು, ಸಯ್ಯಡಿ, ದೇಗಾವಿ, ಅರಸಿಕೇರೆ, ನೇರಲಗಿ, ಸರ್ವಜ್ಞಪುರ, ಬಾಗೇವಾಡಿ ಇತ್ಯಾದಿ ಊರುಗಳು ಪ್ರಸಿದ್ಧ ಅಗ್ರಹಾರಗಳಾಗಿದ್ದವು.

### (ii) ಮಠ-ದೇವಸ್ಥಾನಗಳು

ಪ್ರಾಚೀನ ಕನ್ನಡ ಸಾಹಿತ್ಯ ನಿರ್ಮಾಣದಲ್ಲಿ ಧರ್ಮದ ಪಾತ್ರ ಅಗಾಧವಾಗಿದೆ. ಈ ಮಾತು ಜೈನ, ವೀರಶೈವ, ಬ್ರಾಹ್ಮಣ ಎಂದು ನಾವು ಸಾಹಿತ್ಯವನ್ನು ವರ್ಗೀಕರಿಸುವಲ್ಲಿ ಮತ್ತಷ್ಟು ದೃಢಪಡುತ್ತದೆ. ಸಾಹಿತಿಗಳು ಆಶ್ರಯಿಸಿದುದು ಧರ್ಮವನ್ನು – ಸಾಹಿತಿಗಳಿಗೆ ಆಶ್ರಯ ನೀಡಿದವುಗಳು ಮಠ ಮತ್ತು ದೇವಸ್ಥಾನಗಳು.

ಇವು ಎಂಟು ಒಂಬತ್ತನೆಯ ಶತಮಾನಗಳಲ್ಲಿ ವಿದ್ಯಾಕೇಂದ್ರಗಳಾಗಿ ಪರಿವರ್ತನೆ ಹೊಂದಿದವೆನ್ನುವದಕ್ಕೆ ಸಾಕಷ್ಟು ಶಾಸನಾಧಾರಗಳುಂಟು. ಬಳ್ಳಿಗಾವಿ, ಕುಪ್ಪತ್ತೂರು, ಬಾಂಧವಪುರ, ರೋಣ, ಬಂಕಾಪೂರ, ಲಕ್ಷ್ಮೇಶ್ವರ, ಸಾಲೋಟಗಿ, ಈ ಊರುಗಳಲ್ಲಿಯ ಮಠಗಳು ಅತ್ಯಂತ ಶ್ರೇಷ್ಠ ತರಗತಿಯಾಗಿದ್ದವು.

### (iii) ಘಟಿಕಾ ಸ್ಥಾನ

ಇವು ಸಹ ಉಚ್ಚ ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದು ವಿಖ್ಯಾತ ವಿದ್ವಾಂಸರು ಸೇರಿದು ಯಾವುದಾದರೊಂದು ವಿಷಯ ವನ್ನು ಶಾಸ್ತ್ರಾಧಾರಗಳೊಂದಿಗೆ ಚರ್ಚೆ ಮಾಡುತ್ತಿದ್ದರೆಂದು ತಿಳಿಯುತ್ತದೆ.

### ನಾಗಾಯಿಯ ಶಾಸನಗಳು

(i) ಮೇಲೆ ವರ್ಣಿಸಿದ ವಿದ್ಯಾಸಂಸ್ಥೆಗಳಲ್ಲಿ ಗ್ರಂಥ ಭಂಡಾರಗಳಿದ್ದವೆನ್ನುವುದಕ್ಕೆ ನಾಗಾಯಿಯಲ್ಲಿ ದೊರೆತ ಶಿಲಾ ಶಾಸನಗಳ ಪ್ರಬಲ ಆಧಾರಗಳುಂಟು. ಗ್ರಂಥಭಂಡಾರಗಳನ್ನು ಕುರಿತಾದ ಶಾಸನದ ಅಂಶ ಕೆಳಗಿನಂತಿದೆ.

" ಪ್ರಶಸ್ತಿ ಸಹಿತಂ ಶ್ರೀಮತ್ ಅಯ್ಯರಸನ ಕೈಯ್ಯೊಳಂ ಭೂಮಿಯಂ ಧಾರಾಪೂರ್ವಕಂ ಮಾಡಿಸಿಕೊಂಡು ಶಾಲೆಯು ಲೋದುವ ವೇದಾಧ್ಯಾಯಿಗಳ್ ಇನ್ನೂರ್ವ್ವರ್ಗ್ಗಂ ಶಾಸ್ತ್ರಾ ಧ್ಯಾಯಿಗಳ್ ಅಯ್ವದಿಂಬರ್ಗ್ಗಂ ತದುಪಾಧ್ಯಾಯಿಗಳು ಮೂವರ್ಗ್ಗಂ ಭಟ್ಟದರ್ಶನ ನ್ಯಾಸ ಪ್ರಭಾಕರ ವ್ಯಾಖ್ಯಾತ್ರಿಗಳ್ ಮೂವರ್ಗ್ಗಂ ವೇದಮನೋದಿಸುವ ಉಪಾಧ್ಯಾಯರ್ ಮೂ-ವರ್ಗ್ಗಂ ಶಾಲೆಯ ಸರಸ್ವತಿ ಸರಸ್ವತಿ ಭಂಡಾರಿಗರ್ ಆರ್ವರ್ಗ್ಗಂ ಅಂತು ೨೫೭*ಮಾನಸರ ಅಶನ ಆಚ್ಛಾದನಕ್ಕಂ ಜೀರ್ಣೋದ್ಧಾರ ಖಂಡಸ್ಫುಟಿತ ನವಸುಧಾಕರ್ಮಕ್ಕಂ ಗಂಧಾಕ್ಷತ ಪುಷ್ಪ ಧೂಪ ದೀಪ ನಿವೇದ್ಯಕ್ಕಂ ತ್ರೈಪುರುಷ ದೇವರ ಶಾಲೆಯ ಪರಿಪ ಮಾಣಿಯರ್ಗ್ಗೆ ಸರ್ವ ನಮಸ್ಯವಾಗಿ ಕೊಟ್ಟ ಕೆಯ್

---

* ನಿಜಸಂಖ್ಯೆ ೧೬೭ ಆಗುತ್ತದೆ. ಶಾಸನದಲ್ಲಿ ತಪ್ಪಾಗಿ ಬಿದ್ದಿದೆ.

ಮಾಣಿಕೇಶರದಗಳಿಂ ಬಡಗಮತ್ತರು ೧೦೦೦ ಆ ಹೊಲಂ ನಾಗವಾವಿಯ ದಿಗ್ಗವಿಗೆಯ ಆಲೂರ ಎಡೆಬಾ ಅನದ ಕೆಳಗೆ ಭಟ್ಟದರ್ಶನ ವ್ಯಾಖ್ಯಾತ್ರಿಗೆ ಮತ್ತರು ೩೫ ನ್ಯಾಸ ವ್ಯಾಖ್ಯಾತ್ರಿಗೆ ಮತ್ತರು ೩೦ ಪ್ರಭಾಕರ ವ್ಯಾಖ್ಯಾತ್ರಿಗೆ ಮತ್ತರು ೪೫ ಸರಸ್ವತೀ ಭಂಡಾರಿಗೆ ಮತ್ತ ೩೦ ಘಟಿಕಾ ಪ್ರಹಾರಿಗೆ ಮತ್ತರ ೩೦ ಪಂಚೀಕೇಶ್ವರಕ್ಕೆ.... "

ಶಾಸನಗಳಿಂದ ಆಗಿನ ಕಾಲದ ಆಗ್ರಹಾರ ಘಟಿಕಾ ಸ್ಥಾನಗಳು ಪ್ರೌಢ ವಿದ್ಯಾಕೇಂದ್ರಗಳಾಗಿದ್ದು ಅವುಗಳ ಹೃದಯದಂತಿದ್ದ ಉತ್ತಮ ಸರಸ್ವತಿ ಭಂಡಾರಗಳಿಂದ ಅಲಂಕೃತವಾಗಿದ್ದವೆಂದು ಸಿದ್ಧವಾಗುತ್ತದೆ.

ಮೇಲೆ ವರ್ಣಿಸಿದ ವಿದ್ಯಾಸಂಸ್ಥೆಗಳಲ್ಲಿ ಕಲಿಸುತ್ತಿದ್ದ ವಿಷಯಗಳನ್ನು ಶಾಸನಾಧಾರಗಳಿಂದ ಕೆಳಗಿನಂತೆ ಕ್ರೋಢೀಕರಿಸಬಹುದು: ' ನಾಲ್ಕು ವೇದಗಳು, ಅವುಗಳ ಅಂಗೋಪಾಂಗಗಳು, ಮೀಮಾಂಸ, ಲೋಕಾಯುತ, ಶೈವ, ವೀರಶೈವ, ವೈಷ್ಣವ, ಜೈನ, ಬೌದ್ಧ, ಶಿಲ್ಪ, ಗಜಶಾಸ್ತ್ರ, ಹಯಶಾಸ್ತ್ರ ಜ್ಯೋತಿಷ್ಯ, ನೃತ್ಯ, ಕಾವ್ಯ, ನಾಟಕ, ವ್ಯಾಕರಣ, ಛಂದಸ್ಸು, ವ್ಯಾಪಾರ, ಸೈನ್ಯ, ಇತಿಹಾಸ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಯುದ್ಧಕಲೆ, ತಾಂತ್ರಿಕವಿದ್ಯೆ.... ಇತ್ಯಾದಿ '. ಪಂಡಿತರಿಗೆ ಆ ಆ ವಿಷಯಗಳ ಆಳವಾದ ಪರಿಜ್ಞಾನವಿರುತ್ತಿತ್ತೆಂದುಸಹ ಶಾಸನಗಳು ಸಾರಿ ಹೇಳುತ್ತವೆ. ಈ ಬಗೆಯ ಅಗಾಧ ಪಾಂಡಿತ್ಯ ಸಂಗ್ರಹಕ್ಕೆ ಅಸಂಖ್ಯ ಗ್ರಂಥಗಳ ಅವಲೋಕನವು ಅತ್ಯವಶ್ಯವಿತ್ತೆಂಬ ವಾದವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಮುದ್ರಣಯಂತ್ರವಿಲ್ಲದ

ಆ ಕಾಲದಲ್ಲಿ ಕೇವಲ ಒಬ್ಬ ವ್ಯಕ್ತಿ ಪ್ರತಿಮಾಡಿಕೊಂಡು ಗ್ರಂಥ ಸಂಗ್ರಹಿಸುವದು ಬಹು ಸಾಹಸದ ಕಾರ್ಯವಾಗಿತ್ತು. ಇವೆಲ್ಲ ಕಾರಣಗಳ ಮೂಲಕ ಶಿಕ್ಷಣ ಸಂಸ್ಥೆಗಳಲ್ಲಿ ರಾಜ ಮಹಾರಾಜರಿಂದ ಧನ ಸಹಾಯ ಪಡೆದು ಗ್ರಂಥ ಸಂಗ್ರಹಮಾಡುವ ಕಾರ್ಯವೇ ಸುಲಭವಾದುದೆಂದು ತರ್ಕಿಸಬೇಕಾಗುತ್ತದೆ. ಹೀಗೆ ಸಂಗ್ರಹಿಸಿದ ಗ್ರಂಥಾಲಯಗಳು ಪ್ರತಿಯೊಂದು ವಿದ್ಯಾಕೇಂದ್ರದಲ್ಲಿದ್ದವೆಂಬ ಮಾತನ್ನು ನಾಗಾಯಿಯ ಶಾಸನಗಳು ಎತ್ತಿ ಹಿಡಿಯುತ್ತವೆ.

ಮೇಲೆ ವಿವರಿಸಿದ 'ಸರಸ್ವತಿ ಭಂಡಾರಗಳು' ಶಿಕ್ಷಣ ಸಂಸ್ಥೆಗಳ ಆಶ್ರಯದಲ್ಲಿ ಹುಟ್ಟಿಕೊಂಡವುಗಳು. ಅಂದರೆ ಇವು ಪಂಡಿತರಿಗೆ, ಪ್ರಾಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ ಹೆಚ್ಚಾಗಿ ಮೀಸಲಾಗಿದ್ದವೆಂದು ಸೂಕ್ಷ್ಮಾವಲೋಕನದಿಂದ ತಿಳಿಯುತ್ತದೆ. ಆದರೆ ಸಾಮಾನ್ಯ ಜನರಿಗಾಗಿ ಸಾರ್ವಜನಿಕ ಗ್ರಂಥಾಲಯವು ತೆರೆಯಲ್ಪಟ್ಟುದು ಪ್ರಜಾಪ್ರಭುತ್ವದ ತತ್ವಗಳ ಬೀಜಗಳನ್ನು ಬಿತ್ತಿದ ಬಸವಣ್ಣ ಹಾಗೂ ಅವರ ಅನುಯಾಯಿಗಳಾದ ಶರಣರು ಕ್ರಾಂತಿಗೈದ ಕಾಲವಾದ ಹನ್ನೆರಡನೆಯ ಶತಮಾನದಲ್ಲಿ ಎಂದು ಊಹಿಸಲವಕಾಶವಿದೆ. ಶಾಂತರಸನೆಂಬ ಶರಣನು ವಚನ ಭಂಡಾರಿ (Librarian) ಯಾಗಿದ್ದನೆಂದು ತೋರುತ್ತದೆ. ವಚನ ಭಂಡಾರಿ ಶಾಂತರಸನು ಸ್ವತಃ ತಾನೇ ಶ್ರೇಷ್ಠ ವಚನಕಾರನಾಗಿದ್ದನೆಂಬುದಕ್ಕೆ ಇಂದು ದೊರೆಯುವ ಅವನ ವಚನಗಳೇ ಸಾಕ್ಷಿ. ಅಲ್ಲದೇ ಅವನಿಗೆ ಜ್ಞಾನೋದಯವಾದುದು ಅಗಣಿತ "ಕವಳಿಗೆ"ಗಳಿಂದ (Book) ತುಂಬಿದ ತನ್ನ ಗ್ರಂಥಾಲಯದ

ಲ್ಲಿಯ ಅಲಿಖಿತ ಒಂದು ಓಲೆಯ ಗರಿಯನ್ನು ನೋಡಿದ ಅನಂ-
ತರ. ವಚನ ಗ್ರಂಥಗಳಿಗೆ 'ಕಟ್ಟು' 'ಸಿವುಡು' 'ಕಡತ' 'ಕವಳಿಗೆ'
ಇತ್ಯಾದಿ ಸಮಾನಾರ್ಥದ ಅಚ್ಚಗನ್ನಡ ಶಬ್ದಗಳ ಉಪಯೋಗ
ವಚನ ವಾಙ್ಮಯದಲ್ಲಿ ವಿಶೇಷವಾಗಿ ಕಂಡುಬರುವದರಿಂದ ಅವು
ಗಳ ಪ್ರಕಟನಾ ಕಾರ್ಯ ತ್ವರಿತಗತಿಯಲ್ಲಿತ್ತೆಂದೂ ಜನಸಾಮಾ
ನ್ಯರಲ್ಲಿ ಅವು ಹೆಚ್ಚು ಪ್ರಚಾರದಲ್ಲಿದ್ದವೆಂದೂ ತಿಳಿಯುತ್ತದೆ.
ಹನ್ನೆರಡನೆಯ ಶತಮಾನದಲ್ಲಿ ಶರಣರು ಮಾಡಿದ ಸಮಾಜ
ಸುಧಾರಣೆಗಳ ಮತ್ತು ವಚನ ಶಾಸ್ತ್ರದ ಪರಿಪೂರ್ಣ ಅರಿವುಳ್ಳ
ವರಿಗೆ **ಶಾಂತರಸನದು ಸಾರ್ವಜನಿಕ ಗ್ರಂಥಾಲಯ
ವೆಂದು ಹೊಳೆಯುವದರಲ್ಲಿ ಸಂದೇಹವಿಲ್ಲ. ಈ
ಸಿದ್ಧಾಂತದಿಂದ ಇದು ಭಾರತದ ಪ್ರಪ್ರಥಮ ಸಾರ್ವ
ಜನಿಕ ಗ್ರಂಥಾಲಯವೆನ್ನಬಹುದು.**

## ೩. ಮುಹಮ್ಮದೀಯರು

ಕೇವಲ ದಾಳಿಯನ್ನೇ ಗುರಿಯಾಗಿಟ್ಟುಕೊಂಡು ಬಂದ ಮುಹಮ್ಮದೀಯರಿಂದ ಮೊದಮೊದಲು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆ ಅಪೇಕ್ಷಿಸಿದಷ್ಟಾಗಲಿಲ್ಲವೆನ್ನಬಹುದು. ಮೇಲಿಂದಮೇಲೆ ನಡೆಯುತ್ತಿದ್ದ ಕಾಳಗದ ಗೊಂದಲವೂ ಇದಕ್ಕೆ ಕಾರಣವಾಗಿರಬಹುದು.

ಆದರೂ ಕರ್ನಾಟಕದ ಅನೇಕ ಮುಹಮ್ಮದೀಯ ಅರಸರು ತಮ್ಮ ವಾಚನಕ್ಕೋಸ್ಕರ ಗ್ರಂಥಾಲಯಗಳನ್ನು ಸ್ಥಾಪಿಸಿದ್ದರೆನ್ನುವದಕ್ಕೆ ಇತಿಹಾಸದಿಂದಲೇ ಅನೇಕ ಐತಿಹ್ಯಗಳು ದೊರಕುತ್ತವೆ.

ಹಿಂದೂ ಅರಸರ ಆಳಿಕೆಯು ಅವನತಿ ಹೊಂದಿದ ಅನಂತರ ವಿಜಾಪೂರದ ಸುಲ್ತಾನನಾದ ಆದಿಲಶಹನು ವಿಜಾಪುರದಲ್ಲಿ 'ಆದಿಲಶಾಹಿ ಗ್ರಂಥಾಲಯ' ವೊಂದನ್ನು ಸ್ಥಾಪಿಸಿದನು. ಪರ್ಶಿಯನ್ ಮತ್ತು ಅರಬಿ ಸಾಹಿತ್ಯಗಳ ಪರಿಚಯವುಳ್ಳ ಯಾವನಿಗಾದರೂ ಅದರಲ್ಲಿಯ ಕೆಲವು ಗ್ರಂಥಗಳು ಅಪೂರ್ವವಾದವುಗಳೂ, ಮನೋರಂಜಕವಾದವುಗಳೂ ಆಗಿದ್ದವೆಂದು ತಿಳಿಯುತ್ತದೆ. ಅದರಲ್ಲಿಯ ಅತ್ಯಮೂಲ್ಯವಾದ ಎಲ್ಲ ಹಸ್ತಪ್ರತಿಗಳನ್ನು ಔರಂಗಜೇಬನು ಚಕ್ಕಡಿಗಳಲ್ಲಿ ಹೇರಿಕೊಂಡು ಹೋದನೆಂದೂ ಉಳಿದವುಗಳು ಕೇವಲ ಅವಶೇಷಗಳೆಂದೂ ಹೇಳಲಾಗಿದೆ.

ಇಂದು 'ಆಸಾರ ಮುಹಲ್' ಎಂದು ಕರೆಯಲ್ಪಡುವ ವಿಜಾಪುರದ ಕಟ್ಟಡವು ಮೊದಲು 'ದಾದಮುಹಲ್' (ನ್ಯಾಯಾಲಯ (Court) ಎಂದು ಹೆಸರಾಗಿತ್ತು. ಈ ನ್ಯಾಯಾಲಯವು ಅರಮನೆಯ ಪಟಾಂಗಣದ ಹೊರವಲಯದಲ್ಲಿದ್ದುದರಿಂದ ನ್ಯಾಯ ವಿಚಾರಣೆಗೆ ಅದು ತಕ್ಕುದಲ್ಲವೆಂದು ನಿರ್ಣಯಿಸಲಾಯಿತು. ಅದು ನ್ಯಾಯಾಲಯವಿರುವವರೆಗೆ ಅಲ್ಲಿ ಒಳ್ಳೆ ಸುವ್ಯವಸ್ಥೆಯುಳ್ಳ ಗ್ರಂಥಾಲಯವಿತ್ತೆಂಬುದಕ್ಕೆ ಆ ಕಟ್ಟಡದ ಒಳಕೋಣೆಯ ಗೋಡೆಯಲ್ಲಿರುವ ಕಪಾಟುಗಳ ಮೇಲೆ ಕಪ್ಪು ಮಸಿಯಿಂದ ಬರೆದ ಗ್ರಂಥ ವರ್ಗೀಕರಣದ ಹೆಸರುಗಳೂ, ಗ್ರಂಥ ಸಂಖ್ಯೆಗಳೂ, ಇವು ಇಂದಿಗೂ ಸಾಕ್ಷಿಯಾಗಿ ನಿಂತಿವೆ. ಇದಕ್ಕೆ ಬಹುಶಃ '**ಬಾದಶಾಹಿ ಗ್ರಂಥಾಲಯ**'ವೆಂದು ಕರೆದಿರಲಿಕ್ಕೂ ಸಾಕು. ಈ ಗ್ರಂಥಾಲಯವು ಅರಮನೆಯ ನ್ಯಾಯಾಲಯದೊಂದಿಗೆ ಸ್ಥಳಾಂತರವಾಗಲು 'ದಾದಮುಹಾಲ' (Court) ಎಂಬ ಹೆಸರಿಗೆ ಬದಲಾಗಿ, 'ಆಸಾರ್ ಮುಹಲ್' (ಮುಹಮ್ಮದ ಪೈಗಂಬರರ ಮೀಸೆಯೊಳಗಿನ ಕೆಲವು ಕೂದಲಗಳನ್ನಿಡುವದಕ್ಕಾಗಿ ಮೀಸಲಾದ ಕಟ್ಟಡ) ಎಂದು ಉಪಯೋಗಿಸಲಾಯಿತು.

ಶ್ರೀ ಮುಹಮ್ಮದ ಶೌಕತ್ ಅಲಿ ಎಂಬವರು 'ಮೈಸೂರು ಹುಲಿ ಟೀಪೂಸುಲ್ತಾನ' ಎಂಬ ಗ್ರಂಥವನ್ನು ಕನ್ನಡದಲ್ಲಿ ಪ್ರಕಟಿಸಿದ್ದು ಆಧಾರವಾಗಿ ಅನೇಕ ಐತಿಹಾಸಿಕ ಉದ್ಗ್ರಂಥಗಳನ್ನು ಬಳಸಿಕೊಂಡಿದ್ದಾರೆ. ಇದರಲ್ಲಿ ಟೀಪೂಸುಲ್ತಾನನ ಪಾಂಡಿತ್ಯ ಮತ್ತು ಗ್ರಂಥಪ್ರೇಮವನ್ನು ಕುರಿತಾದ ಭಾಗವು ಕೆಳಗಿನಂತಿದೆ.

“ ಆತನ ಈ ವಿದ್ಯಾಪ್ರವೀಣತೆ ಮತ್ತು ಉಚ್ಚವಿದ್ಯಾ ಪ್ರೇಮದ ಪರಿಣಾಮವೇನಾಯಿತೆಂದರೆ, ಸುಲ್ತಾನನು ಶ್ರೀರಂಗ ಪಟ್ಟಣದಲ್ಲಿ ತನ್ನ ಮೇಲ್ವಿಚಾರಣೆಯಲ್ಲಿ “ ಜಮಿೂ- ಉಲ್- ಉಮರ ” ಎಂಬ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದನು. ಇದ ರಲ್ಲಿ ಕೇವಲ ಧರ್ಮ ವಿದ್ಯೆಯೊಂದೇ ಅಲ್ಲದೆ ಬೇರೆ ವಿದ್ಯೆ ಮತ್ತು ಕಲೆಗಳ ಶಿಕ್ಷಣವನ್ನು ಕೊಡಲಾಗುತ್ತಿತ್ತು. ಇದರ ಸ್ವಂತ ಪುಸ್ತಕ ಭಾಂಡಾರವು ಅತ್ಯಮೂಲ್ಯವಾಗಿದ್ದಿತು. ”

“ ಪುಸ್ತಕ ಭಂಡಾರದ ಮೇಲ್ವಿಚಾರಣೆಗಾಗಿ ಒಬ್ಬ ಲೈಬ್ರರಿ ಯನ್‌ನನ್ನು ನೇಮಕ ಮಾಡಲಾಗಿದ್ದಿತು. ಸುಲ್ತಾನನಿಗೆ ಗ್ರಂಥ ಗಳನ್ನು ಬರೆಯುವದರಲ್ಲಿಯೂ ಹೆಚ್ಚಿನ ಆಸಕ್ತಿಯಿದ್ದಿತು. ”

ಮಹಮ್ಮದ ಗವಾನನು ಕ್ರಿ. ಶ. ೧೪೭೨ರಲ್ಲಿ ಕಟ್ಟಿಸಿದ ವಿದ್ಯಾಲಯದ (ಮದರಸಾ Madrasa) ಕಟ್ಟಡವನ್ನು ಬೀದರಿ ನಲ್ಲಿ ಇಂದಿಗೂ ನೋಡಬಹುದಾಗಿದೆ. ಮಹಮ್ಮದ ಗವಾ ನನ ಜಾಣ್ಮೆ, ಬುದ್ಧಿವಂತಿಕೆ, ಪಾಂಡಿತ್ಯ ಇತ್ಯಾದಿಗಳನ್ನು ಅನೇಕ ಇತಿಹಾಸಕಾರರು ಮನವಾರೆ ಹೊಗಳಿದ್ದಾರೆ. ಕಲೆ ವಿದ್ಯೆ ಗಳ ಮೇಲಿದ್ದ ಅವನ ಪ್ರೇಮವು ಈ ಸುಂದರವಾದ ಕಾಲೇ ಜನ್ನು ಕಟ್ಟಿಸುವದರಲ್ಲಿ ಒಡೆದು ತೋರುತ್ತದೆ. ಸುಪ್ರಸಿದ್ಧ ತತ್ತ್ವವೇತ್ತರನ್ನೂ ಅಲ್ಲಿ ಪ್ರಾಧ್ಯಾಪಕರನ್ನಾಗಿ ನಿಯಮಿಸಿದ ನಲ್ಲದೆ ೩೦೦೦ ಅತ್ಯುತ್ತಮ ಓಲೆ ಗ್ರಂಥಗಳುಳ್ಳ ಅಂದವಾದ ಗ್ರಂಥಾಲಯದಿಂದ ವಿದ್ಯಾಲಯವನ್ನು ಅಲಂಕರಿಸಿದನು. ಇದ ಲ್ಲದೆ ಹೈದರಾಬಾದದ ಸಾಲರಜಂಗನ ( ಕೊಪ್ಪಳ ಸಂಸ್ಥಾನದ ಸರದಾರ) ವಸ್ತು ಸಂಗ್ರಹಾಲಯದ ಮತ್ತು ವಿಜಾಪುರ ಬೋಲ

ಗುಮ್ಮಟದ ವಸ್ತುಸಂಗ್ರಹಾಲಯುಗಳಲ್ಲಿ ಉರ್ದು ಮತ್ತು ಪರ್ಶಿಯನ್ ಗ್ರಂಥಾಲಯಗಳಿರುವದನ್ನು ಇಂದಿಗೂ ನೋಡಬಹುದು.

# ೪ ಆಂಗ್ಲರು

## i) ನೇಟಿವ್ ಜನರಲ್ ಲೈಬ್ರರಿಗಳು

ಕನ್ನಡ ಪ್ರಜಾಕೋಟಿಯಲ್ಲಿ ಕೆಲವು ಜನರು ಆಂಗ್ಲರ ಆಡಳಿತದ ವಿರುದ್ಧ ಕಾರ್ಯನಿರತರಾದರು. ಈ ವಿರೋಧಿಗಳ ಮನವೊಲಿಸಿ ತಮ್ಮ ವಿಚಾರ ಪ್ರಣಾಲಿಯನ್ನು ಅವರ ಮನದಲ್ಲಿ ಬಿತ್ತುವುದಕ್ಕೋಸ್ಕರ ಆ ಪಟ್ಟಣಗಳ ಬ್ರಿಟಿಶ್ ಅಧಿಕಾರಿಗಳು ಮತ್ತು ಅವರ ಹಿಂದೂ ಆಪ್ತ ಸಹಾಯಕರು ಅಲ್ಲಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಿದರು. ಇವುಗಳಿಗೆ 'ನೇಟಿವ್ ಜನರಲ್ ಲೈಬ್ರರಿ' ಗಳೆಂದು ಹೆಸರು. ಕರ್ನಾಟಕದ ಆಧುನಿಕ ಗ್ರಂಥಾಲಯ ಚಳುವಳಿಗೆ ಇವೇ ಗ್ರಂಥಾಲಯಗಳು ಆದಿಯೆನ್ನಬಹುದು. ನೇಟಿವ್ ಜನರಲ್ ಲಾಯಬ್ರರಿಗಳು ಮೊದಲು ಬೆಳಗಾವಿ (೧೮೪೮) ಹಾಗೂ ಧಾರವಾಡ (೧೮೫೪) ಈ ಪಟ್ಟಣಗಳಲ್ಲಿ ಸ್ಥಾಪಿತವಾದವು.

## ii) ಜ್ಯುಬಿಲಿ ಗ್ರಂಥಾಲಯಗಳು

ಬ್ರಿಟನ್ನಿನ ಮಹಾರಾಣಿ ವಿಕ್ಟೋರಿಯಾ ಭಾರತಕ್ಕೂ ಮಹಾರಾಣಿಯಾದಳು. ಆಕೆಯ ಆಳಿಕೆಯ ೬೦ ವರ್ಷಗಳ ನೆನಹಿಗಾಗಿ ನಮ್ಮ ದೇಶದಲ್ಲಿಯೂ ವಜ್ರಮಹೋತ್ಸವ ಪ್ರಾರಂಭವಾಯಿತು. "ದೇಶದ ಅನೇಕ ಪಟ್ಟಣಗಳಲ್ಲಿ ಅವಳ ಗೌರ

ವಾರ್ಷವಾಗಿ, ಅವಳಿಗೆ ಕೃತಜ್ಞತೆಯನ್ನು ಸೂಚಿಸುವದಕ್ಕಾಗಿ ಅನೇಕ "ಜ್ಯುಬಿಲಿ ಗ್ರಂಥಾಲಯ" ಗಳು ಸ್ಥಾಪಿಸಲ್ಪಟ್ಟವು. ಈ ಸಂದರ್ಭದಲ್ಲಿ ಸ್ಥಾಪಿಸಲ್ಪಟ್ಟ ಈ ಗ್ರಂಥಾಲಯಗಳನ್ನು ಕಾರವಾರ, ಕುಮಟಾ, ಕುಂದಗೋಳ– ಇತ್ಯಾದಿ ಊರುಗಳಲ್ಲಿ ಇಂದಿಗೂ ಕಾಣಬಹುದು.

## iii) ಸಾರ್ವಜನಿಕ ಗ್ರಂಥಾಲಯಗಳು

### (ಅ) ಸ್ವಾತಂತ್ರ್ಯದ ಸಮರ

೧೯೧೫–೧೯೧೬ ರಲ್ಲಿ 'ಹೋಮ್‌ರೂಲ್' ಚಳವಳಿಯು ಭಾರತದ ತುಂಬೆಲ್ಲ ಆವರಿಸಿತು. ಕರ್ನಾಟಕವು ಅದಕ್ಕೆ ಹೊರತಾಗಿರಲಿಲ್ಲ. ಆಳರಸರ ವಿರುದ್ಧವಾಗಿ, ಅಸಹಕಾರ, ಶಾಸನ ಭಂಗ, ಚಳುವಳಿಗಳು ಕಾಲಕ್ರಮೇಣ ಉಗ್ರರೂಪ ತಾಳಿದವು. ಸತ್ಯಾಗ್ರಹ, ಉಪವಾಸ ಅಸಾಮಾನ್ಯ ಅಸ್ತ್ರಗಳಾದುವು. ಇವೆಲ್ಲ ಚಟುವಟಿಕೆಗಳಿಗೆ ಪ್ರೇರಕ ಶಕ್ತಿಗಳಾಗಿ ಕೆಲವು ಗ್ರಂಥಾಲಯ ಗಳು ಕನ್ನಡಿಗರಿಂದ ಸ್ಥಾಪಿಸಲ್ಪಟ್ಟವು. ಶ್ರೀ ಕಡಪಾ ರಾಘವೇಂದ್ರರಾಯರು, ಶ್ರೀ ಆಲೂರು ವೆಂಕಟರಾಯರು, ಶ್ರೀ ಕಾರ್ನಾಡ ಸದಾಶಿವರಾಯರು, ಶ್ರೀ ಪಂಜೇ ಮಂಗೇಶರಾಯರು, ಶ್ರೀ ಶಿ. ಶಿ. ಬಸವನಾಳರು– ಇತ್ಯಾದಿ ಗಣ್ಯವ್ಯಕ್ತಿಗಳು ಇಂತಹ ಗ್ರಂಥಾಲಯಗಳನ್ನು ನಾಡಿನ ತುಂಬೆಲ್ಲ ಸ್ಥಾಪಿಸಲು ನೆರವಾದರು. ಶ್ರೀ ಶಾಂತಕವಿಗಳು, ಡೆಪ್ಯುಟಿ ಚನ್ನಬಸಪ್ಪನವರು, ಸರದಾರ ಬಸವಪ್ರಭುದೇಸಾಯಿ, ಅರಟಾಳ ರುದ್ರಗೌಡರು– ಮುಂತಾದವರು ಸಹಾಯಕ್ಕೆ ಬಂದರು.

ರಾಷ್ಟ್ರೀಯತೆಯ ಪ್ರಚಾರ, ಸಂಸ್ಕೃತಿಯ ಪ್ರಸಾರ, ಸಮಾಜೋದ್ಧಾರ ಇವೇ ಮೊದಲಾದವುಗಳು ಈ ಗ್ರಂಥಾಲಯಗಳ ಧ್ಯೇಯಧೋರಣೆಗಳಾಗಿದ್ದವು. ಕನ್ನಡನಾಡು-ನುಡಿಗಳ ಉನ್ನತಿಗಾಗಿ ಕ್ರಿ. ಶ. ೧೮೯೦ ನೆಯ ವರ್ಷ ಸ್ಥಾಪಿಸಲ್ಪಟ್ಟ (ಧಾರವಾಡ) "ಕರ್ನಾಟಕ ವಿದ್ಯಾವರ್ಧಕ ಸಂಘ"ವು ಈ ಗ್ರಂಥಾಲಯಗಳ ಸ್ಥಾಪನೆಯ ಕಾರ್ಯದಲ್ಲಿ ಪ್ರೇರಕ ಶಕ್ತಿಯಾಗಿ ವರ್ತಿಸಿದುದನ್ನು ಮರೆಯುವಂತಿಲ್ಲ. ಕರ್ನಾಟಕ ಗ್ರಂಥಾಲಯ ಚಳವಳಿಯ ಪೂರ್ವಭಾವಿಯಾಗಿ ಸಂಘವು ಮಾಡಿದ ಕಾರ್ಯವು ಸ್ತುತ್ಯವಾಗಿದೆ.

## ಆ) ಗ್ರಂಥಾಲಯ ಚಳವಳಿಯ ಪ್ರಾರಂಭ

ಧಾರವಾಡದಲ್ಲಿ (೧೯೨೦) ರಲ್ಲಿ ನೆರೆದ ಅಖಿಲ ಕರ್ನಾಟಕ ರಾಜಕೀಯ ಪರಿಷತ್ತಿನಲ್ಲಿ ಸಮಗ್ರ ಕರ್ನಾಟಕದ ತುಂಬ ಸಾರ್ವಜನಿಕ ಗ್ರಂಥಾಲಯಗಳನ್ನು ಏಕಸೂತ್ರವಾಗಿ ಸ್ಥಾಪಿಸಬೇಕೆಂಬ ಮಹತ್ವದ ಗೊತ್ತುವಳಿಯೊಂದು ಮೊಟ್ಟಮೊದಲು ಸ್ವೀಕರಿಸಲ್ಪಟ್ಟಿತು. ಕರ್ನಾಟಕವನ್ನು ಇಡಿಯಾಗಿ ದೃಷ್ಟಿಯಲ್ಲಿ ಇಟ್ಟುಕೊಂಡು ಸ್ವೀಕರಿಸಿದ ಈ ಪ್ರಥಮ ರಾಜಕೀಯ ಗೊತ್ತುವಳಿಯು ಕನ್ನಡಿಗರ ದೂರದೃಷ್ಟಿಯನ್ನು ಎತ್ತಿ ತೋರಿಸುತ್ತದೆ. ಆದರೆ ಪರದಾಸ್ಯದಲ್ಲಿದ್ದ ಕನ್ನಡಿಗರಿಗೆ ಮಹತ್ವಪೂರ್ಣ ಗೊತ್ತುವಳಿಯನ್ನು ಕಾರ್ಯರೂಪದಲ್ಲಿ ತರಲು ಸಾಧ್ಯವಾಗಲಿಲ್ಲವೇನೋ ನಿಜ ! ಗೊತ್ತುವಳಿಯಲ್ಲಡಗಿದ್ದ ಅವರ ಆಕಾಂಕ್ಷೆ ಮಾತ್ರ ಕುಗ್ಗಲಿಲ್ಲ. ಒಂಬತ್ತು ವರ್ಷಗಳ ತರುವಾಯ ೧೯೨೯ ರಲ್ಲಿ 'ಅಖಿಲ ಕರ್ನಾಟಕ ವಾಚನಾಲಯ ಪರಿಷತ್ತು' ಶ್ರೀ ಎಸ್. ವಿ. ನರಸಿಂಹ

ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಧಾರವಾಡ ರಾಂತೇಶ ವಾಚನಾಲಯ ದಲ್ಲಿ ಮೊದಲ ಸಲ ಸೇರಿದಾಗ ' ಅಖಿಲ ಕರ್ನಾಟಕ ವಾಚನಾ ಲಯ ಸಂಘ'ದ ಜನನವಾಯಿತು. ಅಷ್ಟರಲ್ಲಿ ರಾಜಕೀಯ ಆಂದೋಲನವು ಕ್ರಮೇಣ ಉಗ್ರರೂಪ ತಾಳುತ್ತಾ ಹೋದುದ ರಿಂದ ಈ ಸಂಘದ ಕಾರ್ಯಕಲಾಪಗಳೆಲ್ಲ ಸ್ಥಗಿತಗೊಂಡವು. ತರುವಾಯ ೧೯೪೪ರಲ್ಲಿ ಧಾರವಾಡದಲ್ಲಿ ನೆರೆದ ಅಖಿಲ ಕರ್ನಾ ಟಕ ಏಕೀಕರಣ ಸಮ್ಮೇಳನದ ಸಂದರ್ಭದಲ್ಲಿ ವಾಚನಾಲಯ ಸಮ್ಮೇಳನವೊಂದನ್ನು ಕರೆಯಲಾಯಿತು. ಅನೇಕ ರಾಜಕೀಯ ಕಾರಣಗಳ ಮೂಲಕ ಈ ಸಮ್ಮೇಳನದಲ್ಲಿ ಹೊಮ್ಮಬೇಕೆಂದು ನಿರ್ಧರಿಸಿದ ಗ್ರಂಥಾಲಯ ಪ್ರಚಾರಕಾರ್ಯಗಳು ಪುನಃ ಸ್ಥಗಿತ ಗೊಂಡವು.

## ೩) ಫೈಝಿ ಸಮಿತಿ

ತನ್ಮಧ್ಯೆ ೧೯೩೭ರಲ್ಲಿ ಮೊದಲನೆಯ ಬಾರಿ ಕಾಂಗ್ರೆಸ್ ಮಂತ್ರಿಮಂಡಲವು ಮುಂಬಯಿ ರಾಜ್ಯದಲ್ಲಿ ಅಧಿಕಾರಕ್ಕೆ ಬಂದೊಡನೆಯೇ ಗ್ರಂಥಾಲಯ ಚಳುವಳಿಗೆ ಹೊಸ ಚೇತನ ಬಂದಂತಾಯಿತು. ಸಾರ್ವಜನಿಕ ಗ್ರಂಥಾಲಯ ಸ್ಥಾಪನೆ, ಬೆಳವಣಿಗೆಗಳ ಬಗೆಗೆ ಯೋಜನೆಯೊಂದನ್ನು ಸಿದ್ಧಪಡಿಸಲು ಸರಕಾರವು ಶ್ರೀ ಎ. ಎ. ಎ. ಫೈಝಿ (Fyzee) ಯವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯೊಂದನ್ನು ನಿಯಮಿಸಿತು. ಈ ಸಮಿತಿಯು ಡಿಸೆಂಬರ ೧೯೪೦ರಲ್ಲಿ ಸರಕಾರಕ್ಕೆ ಅರ್ಪಿಸಿದ ಯೋಜನೆಯಲ್ಲಿ ಮಾಡಿದ ಸೂಚನೆ-ಶಿಫಾರಸುಗಳು ಕರ್ನಾಟಕ

ಗ್ರಂಥಾಲಯ ಚಳುವಳಿಯ ಬೆಳವಣಿಗೆಯಲ್ಲಿ ಅತ್ಯಂತ ಮಹತ್ವ
ದವುಗಳೆನ್ನಬಹುದು.

ಈ ಯೋಜನೆಯಲ್ಲಿ ಹೇಳಿದಂತೆ ಇಡಿಯ ಪ್ರಾಂತ
ಕ್ಕಾಗಿ (ಹಳೆಯ) ಮುಂಬಯಿಯಲ್ಲಿ ಒಂದು ಕೇಂದ್ರ ಗ್ರಂಥಾ
ಲಯ. ಪ್ರಾಂತದ ಮೂರು ಭಾಷೆಗಳಿಗನುಗುಣವಾಗಿ
ಧಾರವಾಡ (ಕನ್ನಡ) ಪುಣೆ (ಮರಾಠಿ) ಅಹಮದಾಬಾದ(ಗುಜ
ರಾಥಿ) ಈ ನಗರಗಳಲ್ಲಿ ಮೂರು ಪ್ರಾದೇಶಿಕ ಗ್ರಂಥಾಲಯ
ಗಳು ( Regional Libraries ), ಪ್ರತಿಯೊಂದು ಪ್ರಾದೇ
ಶಿಕ ಗ್ರಂಥಾಲಯದ ನೇತೃತ್ವದಲ್ಲಿ ಜಿಲ್ಲೆ, ತಾಲೂಕು, ಕಡೆಗೆ
ಹಳ್ಳಿಯ ಗ್ರಂಥಾಲಯಗಳನ್ನು ಸ್ಥಾಪಿಸುವದಾಗಿತ್ತು. ಈ
ಯೋಜನೆಯ ಸೂಚನೆಗಳನ್ನೆಲ್ಲ ಮನ್ನಿಸಿ ಕಾರ್ಯರೂಪಕ್ಕಿಳಿಸಿ ಎಲ್ಲ
ಗ್ರಂಥಾಲಯಗಳಿಗೆ ಆಗತ್ಯವಿದ್ದ ಆರ್ಥಿಕ ಸಹಾಯ ಮಾಡಲು
ಸರಕಾರವು ನಿರ್ಧರಿಸಿತು. ಅಷ್ಟರಲ್ಲಿ ( ೧೯೪೨ ) ಸ್ವಾತಂತ್ರ್ಯ ಚಳ
ವಳಿಯು ಮತ್ತಷ್ಟು ಉಗ್ರರೂಪ ತಾಳಿದುದರಿಂದ ಸರಕಾರದ
ನಿರ್ಧಾರ ಅಷ್ಟಕ್ಕೆ ಗುಪ್ತಗಾಮಿನಿಯಾಗಿ ಉಳಿದು ಪುನಃ ೧೯೪೭
ರಲ್ಲಿ ಭಾರತದ ಸ್ವಾತಂತ್ರ್ಯೋದಯದೊಂದಿಗೆ ಪ್ರಕಟವಾಗಿ
ಕಾರ್ಯರೂಪಕ್ಕಿಳಿಯಿತು. ಧಾರವಾಡದಲ್ಲಿ 'ಪ್ರಾದೇಶಿಕ (ಕೇಂದ್ರ )
ಗ್ರಂಥಾಲಯ' ವು "ಕರ್ನಾಟಕ ವಿದ್ಯಾವರ್ಧಕ ಸಂಘ" ದ
ಆಶ್ರಯದಲ್ಲಿ ಹುಟ್ಟಿ ಬಂದಿತು. ಶ್ರೀ ಉರವಕೊಂಡ ಸ್ವಾಮಿ
ಗಳವರ ಅಧ್ಯಕ್ಷತೆಯಲ್ಲಿ (೧೯೪೮) ಗ್ರಂಥಾಲಯ ಪ್ರಾರಂಭೋ
ತ್ಸವವು ನೆರವೇರಿತು. ಇಂದು ಈ ಗ್ರಂಥಾಲಯದಲ್ಲಿ ೧೮೦೦೦
ಗ್ರಂಥಗಳಿವೆ. ಕನ್ನಡ, ಸಾಹಿತ್ಯ, ಇತಿಹಾಸ, ಸಂಸ್ಕೃತಿಗಳಿಗೆ

ಸಂಬಂಧಿಸಿದ ಅತ್ಯಪೂರ್ವವಾದ ಗ್ರಂಥಗಳಿವೆ. ೪೫ ಪತ್ರಿಕೆಗಳನ್ನು ತರಿಸಲಾಗುತ್ತದೆ. ಆದರೆ ಕನ್ನಡ ರಾಜ್ಯೋದಯದ ನಂತರ (೧೯೫೬) ಸರಕಾರವು ಸಾಕಷ್ಟು ಧನ ಸಹಾಯಮಾಡದೇ ಹೋದುದರಿಂದ ಅದರ ಸ್ಥಿತಿ ಬಹು ಚಿಂತಾಜನಕವಾಗಿತ್ತು. ಇದೀಗ ಮತ್ತೆ ಚೇತರಿಸಿಕೊಳ್ಳುತ್ತಿದೆ. ಇದನ್ನೇ "ಹುಬ್ಬಳ್ಳಿ-ಧಾರವಾಡ ಸರಕಾರಿ ನಗರ ಕೇಂದ್ರ ಗ್ರಂಥಾಲಯ" ವೆಂದು ಮಾರ್ಪಡಿಸಲಾಗಿದೆ. ಒಬ್ಬ ಗ್ರಂಥಭಂಡಾರಿಯನ್ನು ನಿಯಮಿಸಲಾಗಿದೆ.

ಇದಲ್ಲದೆ ಈ ಯೋಜನೆಯನ್ವಯ ಮುಂಬಯಿ ಕರ್ನಾಟಕದಲ್ಲಿಯ ೨ ಜಿಲ್ಲಾ ಗ್ರಂಥಾಲಯ" ಗಳೂ, ೩೨ ತಾಲೂಕು ಗ್ರಂಥಾಲಯಗಳೂ, ೧೦೮೯ ಗ್ರಾಮ ಗ್ರಂಥಾಲಯಗಳೂ, ಸರಕಾರದ ಧನಸಹಾಯಕ್ಕೆ ಅರ್ಹವಾಗಿದ್ದವು.

ಇದೇ ಬಗೆಯಾಗಿ ಮದ್ರಾಸ ಕರ್ನಾಟಕ, ಹೈದರಾಬಾದ ಕರ್ನಾಟಕ, ಹಳೆಯ ಮೈಸೂರು ಕರ್ನಾಟಕ, ಮತ್ತು ಕೊಡಗು ಈ ಪ್ರದೇಶಗಳಲ್ಲಿ ಆಂಗ್ಲರಾಳಿಕೆಯಲ್ಲಿ ಮಂದಗತಿಯಿಂದ ಗ್ರಂಥಾಲಯ ಚಳುವಳಿಯು ಸಾಗಿತ್ತು. ಆದರೆ ಅಲ್ಲಿಯ ಚಳುವಳಿಗೆ ಚೇತನ ಬಂದುದು ಸ್ವಾತಂತ್ರ್ಯದ ನಂತರ. ಕಾರಣ ಆ ಆ ಭಾಗಗಳಲ್ಲಿಯ ಗ್ರಂಥಾಲಯ ಚಳುವಳಿಯ ಸ್ವಾತಂತ್ರ್ಯ ಪೂರ್ವದ ಚಿತ್ರವನ್ನು ಸಂದರ್ಭಾನುಸಾರವಾಗಿ ಮುಂದೆ ವರ್ಣಿಸಲಾಗುವದು.

# ೫. ಪ್ರಜಾಪ್ರಭುತ್ವ

## i) ಮುಂಬಯಿ ಕರ್ನಾಟಕ

ರಾಜ್ಯದಾದ್ಯಂತ ಗ್ರಂಥಾಲಯಗಳ ಬಳ್ಳಿಯನ್ನು ಬೆಳೆಸಬೇಕೆಂದು ಮಾಡಿದ ಕನ್ನಡಿಗರ ಪ್ರಯತ್ನಗಳು ವಿದೇಶೀಯ ಆಳರಸರ ದುರ್ಲಕ್ಷದಿಂದಾಗಿ ವಿಫಲವಾದವೆಂದು ಈ ಹಿಂದೆ ನೋಡಿದ್ದೇವಷ್ಟೇ. ಆದರೆ ಕನ್ನಡಿಗರು ನಿರಾಶರಾಗಿ ಅಷ್ಟಕ್ಕೇ ಕಾರ್ಯವಿಮುಖರಾಗಲಿಲ್ಲ. ಗ್ರಂಥಾಲಯ ಬೆಳವಣಿಗೆಯ ಬಗೆಗೆ ಬಹುದಿನಗಳಿಂದ ಮನದಲ್ಲಿ ಮಾಡಿಸಿಟ್ಟುಕೊಂಡ ಆಶೋತ್ತರಗಳು ಸಿದ್ಧಿಗಾಗಿ ಸಮಯವನ್ನು ಕಾಯ್ದುಕೊಂಡಿದ್ದವು. ೧೯೪೭ರಲ್ಲಿ ದೇಶ ಸ್ವತಂತ್ರವಾಯಿತು. ಎಲ್ಲ ಭಾರತೀಯರಂತೆ ಕನ್ನಡಿಗರೂ ಹರ್ಷ ತಾಳಿದರು. ಈ ಹರ್ಷೋತ್ಸಾಹದಲ್ಲಿ ಅವರು ಕಾಯುತ್ತಿದ್ದ ಸುಮುಹೂರ್ತವು ಒದಗಿ ಬಂದಿತು. ಮರು ವರುಷವೇ (೧೯೪೮, ಡಿಸಂಬರ) " ಅಖಿಲ ಕರ್ನಾಟಕ ಪುಸ್ತಕ ಭಂಡಾರಗಳ ಮೊದಲನೆಯ ಸಮ್ಮೇಳನ " ಧಾರವಾಡದಲ್ಲಿ ವೈಭವದಿಂದ ಜರುಗಿತು. ಸಮ್ಮೇಳನದ ಅಧ್ಯಕ್ಷಸ್ಥಾನದಲ್ಲಿ ನಿಂತು ಮಾತನಾಡಿದ ಅಂದಿನ ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಭಂಡಾರಿಗಳಾದ ಶ್ರೀ ಜಿ. ಹನುಮಂತರಾವರ ಭಾಷಣವು ಬಹು ಉದ್ಬೋಧಕವಾಗಿದೆ.

" ಕರ್ನಾಟಕ ಏಳಿಗೆಯ ಬಗ್ಗೆ ಏನೊಂದು ಬೇಕಾದರೂ

ಧಾರವಾಡ ಅದನ್ನು ಮೊದಲು ಕಾಣುತ್ತದೆ. ಕಂಡ ಕನಸನ್ನು ಅದು ಕಾರ್ಯರೂಪಕ್ಕೆ ತರಲು ಹೃತ್ಪೂರ್ವಕವಾಗಿ ದುಡಿಯುತ್ತದೆ. ಕರ್ನಾಟಕ ಭಾಷೆ ಮತ್ತು ಸಾಹಿತ್ಯಗಳ ಪುನರುಜ್ಜೀವನಕ್ಕೆ, ಕರ್ನಾಟಕದ ಏಕೀಕರಣಕ್ಕೆ ಕಾರಣವಾದುದುದು ಧಾರವಾಡ. "ಶ್ರೀ" ಯವರು "ಕನ್ನಡ ತಾಯಿಯೆತ್ತುವ ಬಗೆ" ಎಂಬ ಭಾಷಣ ಮಾಡಿದುದು ಇಲ್ಲಿ, ಡಿಶಂಬರ ೧೯೧೧ರಲ್ಲಿ. ಅವರ ಕನ್ನಡ ಭಾಷಣಗಳಲ್ಲಿ ಅದು ಮೊದಲನೆಯ ಭಾಷಣ. ಅತ್ಯಂತ ಉತ್ತಮವಾದುದು. ಅಲ್ಲಿಂದೀಚೆಗೆ ಸಾಹಿತ್ಯ ಸಮ್ಮೇಳನಗಳೂ ಕವಿ ಸಮ್ಮೇಳನಗಳೂ ಅನೇಕವಾಗಿ ಇಲ್ಲಿ ನಡೆದಿವೆ. ಪುಸ್ತಕ ಭಂಡಾರಗಳ ವಿಚಾರದಲ್ಲಿ ಜನರಲ್ಲಿ ಹುರುಪು ಹುಟ್ಟಿಸುವ ಸಲುವಾಗಿ ಮೊದಲನೆಯ ಸಮ್ಮೇಳನವನ್ನು ಧಾರವಾಡದವರು ಕರೆದು ಕೂಡಿಸಿರುವದು ಧಾರವಾಡದ ಮುಂದಾಳುತನಕ್ಕೆ ಸಹಜವಾಗಿಯೇ ಇದೆ."

ಈ ಸಮ್ಮೇಳನದ ಪ್ರಾರಂಭೋತ್ಸವವನ್ನು ಕೇಂದ್ರ ಸರಕಾರದ ಮಾಜಿ ವಿದ್ಯಾಸಚಿವರಾದ, ಅಂದಿನ ಮುಂಬಯಿ ಹೈಕೋರ್ಟಿನ ಮುಖ್ಯ ನ್ಯಾಯಾಧೀಶರಾದ ಶ್ರೀ ಎಂ. ಸಿ. ಛಗಲಾ ಅವರು ನೆರವೇರಿಸಿದರು.

"ಸಮ್ಮೇಳನದಲ್ಲಿ ಮುಂಬಯಿ ಕರ್ನಾಟಕ ಭಾಗದಲ್ಲಿಯ ಗ್ರಂಥಾಲಯಗಳನ್ನು ಸಂಘಟಿಸುವ ಮತ್ತು ಅಭಿವೃದ್ಧಿಗೊಳಿಸುವ ಉದ್ದೇಶದಿಂದ ಮುಂಬಯಿ ಕರ್ನಾಟಕ ಗ್ರಂಥಾಲಯ ಸಂಘವನ್ನು ಸ್ಥಾಪಿಸಬೇಕೆಂದೂ, ಅದೇ ಉದ್ದೇಶ ಪೋಷಣೆಗಾಗಿ ಜಿಲ್ಲಾ ಗ್ರಂಥಾಲಯ ಸಂಘಗಳನ್ನು ಸ್ಥಾಪಿಸಬೇಕೆಂದೂ

ನಿರ್ಣಯಿಸಲಾಯಿತು. ” ಈ ನಿರ್ಣಯದಂತೆ ಸಂಘವು ಸ್ಥಾಪಿತ ವಾಯಿತು. ಆದರೆ ಅದಕ್ಕೆ ಸರಕಾರದ ಮನ್ನಣೆ ದೊರಕಿದುದು ೧೯೫೦ರಲ್ಲಿ.

ಮುಂಬಯಿ ಕರ್ನಾಟಕ ಗ್ರಂಥಾಲಯ–ವಾಚನಾಲಯಗಳ ೨ನೆಯ ಸಮ್ಮೇಲನವು ೧೯೫೨ನೆಯ ಫೆಬ್ರುವರಿ ೧-೨ನೆಯ ದಿನಾಂಕಗಳಂದು ಕುಂದಗೋಳದಲ್ಲಿ ಜರುಗಿತು. ಬೆಳಗಾವಿಯ ಪ್ರಸಿದ್ಧ ವಕೀಲರೂ, ಲೋಕಸಭೆಯ ಸದಸ್ಯರೂ ಆಗಿದ್ದ ಶ್ರೀ ದಾತಾರ ಬಳವಂತರಾಯರು ಅಧ್ಯಕ್ಷರಾಗಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಉಪಕುಲಪತಿಗಳಾದ ಸಿ. ಸಿ. ಹುಲಕೋಟಿಯವರು ಸಮ್ಮೇಲನವನ್ನು ಉದ್ಘಾಟಿಸಿದರು. ಕುಂದಗೋಳದ ಉತ್ಸಾಹಿ ವಕೀಲರಾದ ಶ್ರೀ. ಎಸ್. ಹೆಚ್. ಪಾಟೀಲರು ಸ್ವಾಗತಾಧ್ಯಕ್ಷರಾಗಿದ್ದರು.

ಈ ಸಮ್ಮೇಲನದಲ್ಲಿ ಸ್ವೀಕರಿಸಲ್ಪಟ್ಟ ಮಹತ್ವದ ೧೭ ಗೊತ್ತುವಳಿಗಳನ್ನು ಅವಲೋಕಿಸಿದರೆ ಕನ್ನಡಿಗರ ಮುಂಧೋರಣೆ, ಜಾಣ್ಮೆ, ಗೈಮೆಗಳ ಅರಿವಾಗುತ್ತದೆ.

ಇದರ ಮೂರನೆಯ ಅಧಿವೇಶನವು ಶ್ರೀ ಆದ್ಯ ರಂಗಾಚಾರ್ಯರ ಅಧ್ಯಕ್ಷತೆಯಲ್ಲಿ ಕುಮಟೆಯ “ ಜುಬಿಲಿ ವಾಚನಾಲಯ ” ದ ಆಶ್ರಯದಲ್ಲಿ ( ಡಿಶಂಬರ ೧೯೫೩ ) ನೆರವೇರಿತು. ಶ್ರೀ ನಾಯಕ ವೆಂಕಟರಾಯರು ಸಮ್ಮೇಳನವನ್ನು ಉದ್ಘಾಟಿಸಿದರು. ಅಧಿವೇಶನದಲ್ಲಿ ವಿಚಾರಪೂರಿತ ೧೩ ಗೊತ್ತುವಳಿಗಳು ಸ್ವೀಕೃತವಾದವು. ತಮ್ಮ ಭಾಷಣಗಳಲ್ಲಿ ಅಧ್ಯಕ್ಷರು ಮಾಡಿದ ಸೂಚನೆಯೊಂದು ಯಥೋಚಿತವಾಗಿದೆ.

" ಇದುವರೆಗೆ ಮುಂಬಯಿ ಸರಕಾರದ ಸಹಾಯದ ನಿಮಿತ್ತವಾಗಿ ನಾವು " ಮುಂಬಯಿ ಕರ್ನಾಟಕ " ಕ್ಕೆ ನಮ್ಮ ಕ್ಷೇತ್ರವನ್ನು ಮರ್ಯಾದಿತಗೊಳಿಸಿರಬಹುದು. ಆದರೆ ಇನ್ನು ಮುಂದಾದರೂ ಈ ಸಮ್ಮೇಳನಗಳನ್ನು " ಅಖಿಲ ಕರ್ನಾಟಕ " ಸಮ್ಮೇಳನಗಳನ್ನಾಗಿ ಮಾರ್ಪಡಿಸಿಕೊಳ್ಳಬೇಕು. ಅಖಂಡ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಅದನ್ನು ಸೇರಿಸಬೇಕು".

ಮೇಲಿನ ಸೂಚನೆ ಮುಂದಿನ ಸಮ್ಮೇಳನದಲ್ಲಿ ಪರಿಣಾಮ ಬೀರಿದಂತಿದೆ: "ನಾಲ್ಕನೆಯ ಪರಿಷತ್ತು ಪದ್ಮಶ್ರೀ ಶ್ರೀ ಬಿ.ಎಸ್. ಕೇಶವನ್ ಇವರ ಅಧ್ಯಕ್ಷತೆಯಲ್ಲಿ ೧೯೫೮ರ ಫೆಬ್ರುವರಿ ತಿಂಗಳಲ್ಲಿ ಧಾರವಾಡದಲ್ಲಿ ಜರುಗಿತು. ಕರ್ನಾಟಕ ರಾಜ್ಯ ನಿರ್ಮಾಣಗೊಂಡ ನಂತರ ಜರುಗಿದ ಗ್ರಂಥಾಲಯ ಸಮ್ಮೇಲನವೆಂದರೆ ಇದೇ ಮೊದಲನೆಯದು. ಸಮ್ಮೇಳನದಲ್ಲಿ ಸರ್ವಾನುಮತದಿಂದ ಗೊತ್ತಾದ ಗೊತ್ತುವಳಿಗಳಲ್ಲಿ ಎರಡು ಮುಖ್ಯವಾದವು. ಮೊದಲನೆಯದು ರಾಜ್ಯದಲ್ಲಿ ಬೇಗನೇ ಗ್ರಂಥಾಲಯ ಕಾಯದೆಯೊಂದನ್ನು ತರಬೇಕೆಂದು ರಾಜ್ಯಸರಕಾರವನ್ನು ಒತ್ತಾಯಪಡಿಸಿದರೆ, ಎರಡನೆಯ ಗೊತ್ತುವಳಿ ನವಮೈಸೂರನ್ನೊಳಗೊಂಡ "ಅಖಿಲ ಕರ್ನಾಟಕ ಗ್ರಂಥಾಲಯ ಸಂಘ" ವೊಂದನ್ನು ಸ್ಥಾಪಿಸಿ ಅದಕ್ಕಾಗಿ ಕರಡೊಂದನ್ನು ಸಿದ್ಧಪಡಿಸಲು ಉಪಸಮಿತಿಯೊಂದನ್ನು ನೇಮಿಸಿತು." ಆದರೆ ಉಪಸಮಿತಿಯ ಕಾರ್ಯ ತ್ವರಿತಗತಿಯಲ್ಲಿ ಸಾಗಲಿಲ್ಲ.

ಮುಂಬಯಿ ಕರ್ನಾಟಕಕ್ಕೆ ಮೀಸಲಾದ ಸಂಘವೇ ಈವರೆಗೆ ಎರಡು ಸಲ ಗ್ರಂಥಭಂಡಾರಿಗಳನ್ನು ತರಬೇತಿಗೊಳಿಸುವ

ಅಲ್ಪಾವಧಿ ವರ್ಗಗಳನ್ನು ನಡೆಯಿಸಿ ಉತ್ತೀರ್ಣರಾದವರಿಗೆ ಪ್ರಶಸ್ತಿ ಪತ್ರಗಳನ್ನಿತ್ತಿದೆ. ಕೆಲವು ನುರಿತ ತಜ್ಞ ಭಾಷಣಕಾರರ ಉಪನ್ಯಾಸವನ್ನೇರ್ಪಡಿಸಿ ಗ್ರಂಥಾಲಯ ವಿಜ್ಞಾನದ ತತ್ವ ಪ್ರಸಾರ ಮಾಡಿದೆ. ಇಲ್ಲಿಯವರೆಗೆ ಕರ್ನಾಟಕದಲ್ಲಿಯ ೧೯೮ ಸಾರ್ವಜನಿಕ ಗ್ರಂಥಾಲಯಗಳನ್ನು ಸಂದರ್ಶಿಸಿ ಅಲ್ಲಿಯ ಕಾರ್ಯ ಪದ್ಧತಿ, ಗ್ರಂಥವ್ಯವಸ್ಥೆ, ಗ್ರಂಥಪರಿಚಲನೆ, ನೌಕರರ ಸ್ಥಾನ,- ಇತ್ಯಾದಿ ವಿವರಗಳನ್ನು ಸಂಗ್ರಹಿಸಿದೆ.

### ii) ಹೈದರಾಬಾದ ಕರ್ನಾಟಕ

ಕರ್ನಾಟಕದ ಇತರ ಭಾಗಗಳಿಗಿಂತ ಈ ಭಾಗವು ಶೈಕ್ಷಣಿಕ ದೃಷ್ಟಿಯಿಂದ ಬಹು ಹಿಂದುಳಿದುದಾಗಿದೆಯೆಂದು ಹೇಳಬಹುದು. ಆದರೆ ಗ್ರಂಥಾಲಯ ಚಳುವಳಿಯು ಇಲ್ಲಿ ಕಳೆದ ದಶಕದಲ್ಲಿ ತೀವ್ರಗತಿಯನ್ನು ಹೊಂದಿತು. ೧೯೫೫ರಲ್ಲಿ ಹೈದರಾಬಾದ ಪ್ರಾಂತದಲ್ಲಿ ಗ್ರಂಥಾಲಯ ಕಾನೂನು ಸರಕಾರದಿಂದ ಸ್ವೀಕರಿಸಲ್ಪಟ್ಟು ಜಾರಿಗೆ ತರುವ ವೇಳೆಗೆ ಭಾಷಾವಾರು ಪ್ರಾಂತ ರಚನೆಯಾದುದರಿಂದ ಈ ಕಾನೂನಿನ ಕಕ್ಷೆಯಲ್ಲಿ ಬರುವ ಕಲಬುರ್ಗಿ, ಬೀದರ, ರಾಯಚೂರು ಜಿಲ್ಲೆಗಳು ನವಮೈಸೂರು ರಾಜ್ಯದಲ್ಲಿ ವಿಲೀನಗೊಂಡವು. ಈ ಮೂರು ಜಿಲ್ಲೆಗಳನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಟ್ಟುಕೊಂಡು ೧೯೬೧ರಲ್ಲಿ “ಕರ್ನಾಟಕ ಗ್ರಂಥಾಲಯ ಸಂಘ” ವೊಂದು ರೂಪುಗೊಂಡು ಕಾರ್ಯ ಪ್ರವೃತ್ತವಾಗಿದೆ. ಇಲ್ಲಿ ೭ ಸಾರ್ವಜನಿಕ ಗ್ರಂಥಾಲಯಗಳಿದ್ದು ಅವು ಜನಾನುರಾಗವನ್ನು ಗಳಿಸಿವೆ. ಸರಕಾರದ ಸಹಾಯ

ಪಡೆಯುತ್ತಿರುವ ಇನ್ನೆರಡು ಗ್ರಂಥಾಲಯಗಳಲ್ಲಿ ಓದುಗರಿಂದ ಅಲ್ಪವೊತ್ತದ ಶುಲ್ಕವನ್ನು ಸ್ವೀಕರಿಸಲಾಗುತ್ತದೆ. ಒಟ್ಟಾರೆ ಇಲ್ಲಿ ಗ್ರಂಥಾಲಯಗಳ ಚಳುವಳಿಗೆ ಈಗ ಒಂದು ಮೂರ್ತ ಸ್ವರೂಪ ಬಂದಿದೆ.

### iii) ಮದ್ರಾಸ ಕರ್ನಾಟಕ

ನವಮೈಸೂರು ರಾಜ್ಯದಲ್ಲಿ ವಿಲೀನವಾಗಿರುವ ಬಳ್ಳಾರಿ ಮತ್ತು ಮಂಗಳೂರು ಈ ಎರಡು ಕನ್ನಡ ಜಿಲ್ಲೆಗಳು ಮೊದಲು ಮದ್ರಾಸ ಪ್ರಾಂತದಲ್ಲಿದ್ದವು. ಈ ಜಿಲ್ಲೆಗಳು ಉಳಿದ ಕನ್ನಡ ಭಾಗಗಳಿಗಿಂತ ಶೈಕ್ಷಣಿಕ ದೃಷ್ಟಿಯಲ್ಲಿ ಒಂದು ಹೆಜ್ಜೆ ಮುಂದೆ ಇವೆ. ಮದ್ರಾಸ ಸರಕಾರವು ೧೯೪೮ರಲ್ಲಿ ಗ್ರಂಥಾಲಯ ಕಾಯಿದೆಯನ್ನು ಸ್ವೀಕರಿಸಿ ಜಾರಿಗೆ ತಂದಿತು. ಕಾರಣ ಎರಡೂ ಜಿಲ್ಲೆಗಳಲ್ಲಿ ಗ್ರಂಥಾಲಯಗಳ ಜಾಳಿಗೆ ಹಬ್ಬಿಕೊಂಡಿವೆ. “ದಕ್ಷಿಣ ಕನ್ನಡ ಜಿಲ್ಲೆಯ ಗ್ರಂಥಾಲಯ ಸಂಘ”ವು ಪದ್ಮಶ್ರೀ ಡಾ. ರಂಗನಾಥನ್‌ರ ಹಿರಿತನದಲ್ಲಿ ಇತ್ತೀಚೆಗೆ ಉದಯವಾಗಿ ಹುರುಪಿನಿಂದ ಕಾರ್ಯ ನಡೆಯಿಸಿದೆ. ಮಂಗಳೂರಿನಲ್ಲಿರುವ ‘ಕಾರ್ನಾಡ ಸದಾಶಿವರಾವ ಸಾರ್ವಜನಿಕ ಗ್ರಂಥಾಲಯ’ವು ಜಿಲ್ಲಾ ಗ್ರಂಥಾಲಯವೆಂದು ಪರಿಗಣಿಸಲ್ಪಟ್ಟಿದೆ. ಉಡುಪಿ, ಕುಂದಾಪುರ, ಕಾರ್ಕಳ, ಪುತ್ತೂರು ಮತ್ತು ಬೆಳ್ತಂಗಡಿ ಇವು ಅದರ ಶಾಖಾ ಗ್ರಂಥಾಲಯಗಳಾಗಿವೆ. ಹಳ್ಳಿಗಳಿಗೆ ಗ್ರಂಥಗಳ ವಿತರಣೆ ೨೮ ಸ್ಥಳಗಳಿಂದ ನಡೆಯುತ್ತದೆ.

೧೯೫೯ರಲ್ಲಿ ಜಿಲ್ಲೆಯ ಭಂಡಾರಿಗಳು ಗ್ರಂಥಾಲಯ ಶಾಸ್ತ್ರದ ಜ್ಞಾನಕ್ರಿಯೆಗಳನ್ನು ಕುರಿತು ಒಂದು ವಾರದ ವರೆಗೆ ಚರ್ಚಾಕೂಟವನ್ನೇರ್ಪಡಿಸಿದ್ದರು. ಪುತ್ತೂರು, ಉಡುಪಿ ಇತ್ಯಾದಿ ತಾಲೂಕು ಸ್ಥಳಗಳಲ್ಲಿ ನೂತನ ಗ್ರಂಥಾಲಯ ಕಟ್ಟಡಗಳ ನಿರ್ಮಾಣ ಕಾರ್ಯ ನಡೆದಿದೆ.

## iv) ಕೊಡಗು

ಚೆಡಗಿನ ಬೀಡಾದ ಕೊಡಗು ಜಿಲ್ಲೆ ಮೊದಲು ಕೇಂದ್ರ ಸರಕಾರದ ಆಡಳಿತಕ್ಕೊಳಪಟ್ಟಿತ್ತು. ಆಗ 'ಮಡಕೇರಿ ಪುಸ್ತಕ ಮಂಡಳ'ವು (The Mercara Book Club) ಸ್ಥಾಪಿತವಾಗಿ ಒಂದು ಸಾರ್ವಜನಿಕ ಗ್ರಂಥಾಲಯವನ್ನು ಸ್ಥಾಪಿಸಿತು. ಸ್ಥಳೀಯ ಸರಕಾರಿ ಅಧಿಕಾರಿಗಳು ಹಾಗೂ ಶ್ರೀಮಂತ ಭೂಮೊಡೆಯರು ಈ ಗ್ರಂಥಾಲಯ ಆಡಳಿತ, ಖರ್ಚು, ವೆಚ್ಚಗಳನ್ನು ನಿರ್ವಹಿಸುತ್ತ ಬಂದರು. ಕೆಲವು ಅನಾನುಕೂಲತೆಗಳ ಮೂಲಕ 'ಮಂಡಳ'ವು ಗ್ರಂಥಾಲಯದ ಆಡಳಿತವನ್ನು ಕಾಲಾಂತರದಲ್ಲಿ ಮಡಕೇರಿಯ 'ಪ್ರೋರ್ಟ್‌ಕ್ಲಬ್' ಎಂಬ ಮತ್ತೊಂದು ಸಂಸ್ಥೆಗೆ ಬಿಟ್ಟುಕೊಟ್ಟಿತು. ಅಷ್ಟಾದರೂ ೧೯೪೦ರಿಂದ ಈಚೆಗೆ ಆರ್ಥಿಕ ಅಡಚಣೆಯಿಂದಾಗಿ ಈ ಗ್ರಂಥಾಲಯದ ಕಾರ್ಯ ಕುಂಠಿತವಾಗಿದೆ. ಈ ಜಿಲ್ಲೆಯಲ್ಲಿ ಇದೇ ಪ್ರಥಮ ಸಾರ್ವಜನಿಕ ಗ್ರಂಥಾಲಯವೆನ್ನಬಹುದು.

ಶ್ರೀ ಬಿ. ಎಯ್. ಗಣಪತಿ ಎಂಬ ಜನಪ್ರಿಯ ಸಾಮಾಜಿಕ ಕಾರ್ಯಕರ್ತನ ಸ್ಮಾರಕವೆಂದು 'ಗಣಪತಿ ಸಾರ್ವಜನಿಕ

ಗ್ರಂಥಾಲಯು ” ವು ವಿರಾಜಪೇಟೆಯಲ್ಲಿ ೧೯೫೬ರಲ್ಲಿ ಸ್ಥಾಪಿತ ವಾಯಿತು. ಇಂದು ಸಾಕಷ್ಟು ಧನಸಹಾಯವಿಲ್ಲದುದರಿಂದ ಈ ಗ್ರಂಥಾಲಯದ ಕಾರ್ಯಗಳು ಸಹ ಅಷ್ಟು ಚನ್ನಾಗಿ ಸಾಗಿಲ್ಲ.

೧೯೫೪ರಲ್ಲಿ 'ಮಹಾತ್ಮಾ ಗಾಂಧಿ ಸಾರ್ವಜನಿಕ ಗ್ರಂಥಾಲಯು ' ವು ಮಡಕೇರಿಯಲ್ಲಿ ಪ್ರಾರಂಭವಾಯಿತು. ಇದರ ಉದ್ದೇಶ ವಯಸ್ಕರ ಶಿಕ್ಷಣ ಸಂಸ್ಥೆಗಳಿಗೆ ಸಹಾಯ ಮಾಡುವುದಾಗಿದೆ. ಇದರ ಅಧೀನಕ್ಕೊಳಪಟ್ಟ ೧೦೪ ಉಪಶಾಖೆಗಳೆಂದು ಗ್ರಾಮ ಪುಸ್ತಕ ಭಂಡಾರಗಳು ಸ್ಥಾಪಿತವಾಗಿವೆ. ಆ ಗ್ರಾಮದ ಸಮಾಜ ಶಿಕ್ಷಣ ಕೇಂದ್ರ, ಅಕ್ಷರ ಪ್ರಚಾರ ಕೇಂದ್ರ, ಮಹಿಳಾ ಮಂಡಳ ಇವುಗಳ ಆಶ್ರಯದಲ್ಲಿ ನಡೆಯುತ್ತವೆ. ಗ್ರಂಥಾಲಯದ ಕಾರ್ಯಗಳನ್ನು ಹೆಚ್ಚಾಗಿ ಶಾಲಾ ಶಿಕ್ಷಕರು ನೋಡಿಕೊಳ್ಳುತ್ತಾರೆ. ಇವುಗಳಲ್ಲಿ ೨೩ ಭಂಡಾರಗಳಿಗೆ ರೇಡಿಯೋಗಳನ್ನು ಒದಗಿಸಲಾಗಿದೆ.

ಎಲ್ಲ ಭಂಡಾರಗಳ ಆಡಳಿತ ವ್ಯವಸ್ಥೆಯನ್ನು ಜಿಲ್ಲಾ ಶಿಕ್ಷಣಾಧಿಕಾರಿಯು ನೋಡಿಕೊಳ್ಳುತ್ತಾನೆ. ಅವನ ಸಹಾಯಕ್ಕೆ ಒಬ್ಬ ವ್ಯವಸ್ಥಾಪಕನನ್ನು ನಿಯಮಿಸಲಾಗಿದೆ. ವ್ಯವಸ್ಥಾಪಕನು ಕಾಲಕಾಲಕ್ಕೆ ಭಂಡಾರಗಳ ತಪಾಸಣೆಯನ್ನು ಮಾಡುತ್ತಾನೆ. ಪ್ರತಿಯೊಂದು ಭಂಡಾರವು ಸ್ಥಳೀಯ ಐವರು ಸದಸ್ಯರುಳ್ಳ ಸಮಿತಿಯ ಮೇಲ್ವಿಚಾರಣೆ ಮಾರ್ಗದರ್ಶನಗಳಿಗೆ ಒಳಪಟ್ಟಿದೆ.

ಇತ್ತೀಚೆಗೆ ಗ್ರಂಥಾಲಯ ಚಳವಳಿಗೆ ಇಲ್ಲಿ ಹೆಚ್ಚು ಚಾಲನೆ ದೊರೆತಿದೆ.

### v) ಹಳೆಯ ಮೈಸೂರು ಸಂಸ್ಥಾನ

ಬೆಂಗಳೂರಿನಲ್ಲಿ (೧೯೧೫) ಆರ್ಥಿಕ ಸಮ್ಮೇಳನವೊಂದು ನೆರೆಯಿತು. ಅದರ ಅಂಗವಾಗಿ ಕೂಡಿದ ಶಿಕ್ಷಣ ಸಮಿತಿಯು ಸಂಸ್ಥಾನದ ತುಂಬೆಲ್ಲ ಸಾರ್ವಜನಿಕ ಗ್ರಂಥಾಲಯಗಳ ಸ್ಥಾಪನೆಯನ್ನು ಕುರಿತು ಚರ್ಚಿಸಿತು. ಆಗಿನ ಜನಪ್ರಿಯ ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ಶಿಕ್ಷಣ ಸಮಿತಿಯ ಸೂಚನೆಗಳನ್ನು ಮಾನ್ಯಮಾಡಿ ಜಿಲ್ಲಾ, ತಾಲೂಕು ಹಾಗೂ ಗ್ರಾಮ ಮಟ್ಟದ ಗ್ರಂಥಾಲಯಗಳಿಗೆ ಅವಶ್ಯವೆನಿಸಿದ ಧನ ಸಹಾಯ ಮಾಡಲು ಮುಂದಾದರು. ಆ ಪ್ರಕಾರ ಅಲ್ಲಲ್ಲಿ ಗ್ರಂಥಾಲಯಗಳು ಹುಟ್ಟಿಕೊಂಡವು. ಅವುಗಳಲ್ಲಿ ಬೆಂಗಳೂರು ಮತ್ತು ಮೈಸೂರು ಸಾರ್ವಜನಿಕ ಗ್ರಂಥಾಲಯದಲ್ಲಿ ೩೫೦೦೦ಕ್ಕೂ ಮಿಕ್ಕಿ ಗ್ರಂಥಗಳಿದ್ದು, ಸುಮಾರು ೩೫೮ ನಿಯತಕಾಲಿಕಗಳನ್ನು ತರಿಸುತ್ತಿದೆ. ಮೈಸೂರು ಸಾರ್ವಜನಿಕ ಗ್ರಂಥಾಲಯದಲ್ಲಿ ಸುಮಾರು ೨೦,೦೦೦ ಗ್ರಂಥಗಳಿದ್ದು ೬೦ ನಿಯತ ಕಾಲಿಕಗಳನ್ನು ಕೊಳ್ಳುತ್ತಿದೆ. ಬೆಂಗಳೂರಿನದು ಈಗ ಸರಕಾರದ ರಾಜ್ಯಕೇಂದ್ರ ಗ್ರಂಥಾಲಯವಾಗಿ ಮಾರ್ಪಟ್ಟಿದೆ.

ಹಳ್ಳಿಹಳ್ಳಿಗೆ ಗ್ರಂಥವಿತರಣೆ ಮಾಡುವದಕ್ಕಾಗಿ ಒಂದು ಚಲಿಸುವ ಗ್ರಂಥಾಲಯವನ್ನು ತೆಗೆಯುವ ಯೋಜನೆಯನ್ನು ಸರಕಾರವು ಇಟ್ಟುಕೊಂಡಿತ್ತು. ಆದರೆ ಅದು ಈ ವರೆಗೂ ಸಾಧಿಸಿಲ್ಲ.

೧೯೨೦ರಲ್ಲಿ ಸಂಸ್ಥಾನದ ಕೆಲವು ಪ್ರಾಥಮಿಕ ಶಿಕ್ಷಕರಿಗೆ ಗ್ರಂಥಾಲಯ ತರಬೇತಿಯನ್ನು ಕೊಡಲಾಯಿತು. ಆದರೂ

ಹಳೆಯ ಮೈಸೂರು ರಾಜದಲ್ಲಿ ಸಾರ್ವಜನಿಕ ಗ್ರಂಥಾಲಯ ಚಳುವಳಿಗೆ ಸಾಕಷ್ಟು ಉತ್ತೇಜನ ದೊರೆಯಲಿಲ್ಲ.

**vi) ನವ ಮೈಸೂರು ರಾಜ್ಯದಲ್ಲಿ ೧೯೫೬ರ ತರುವಾಯ**

ಭಾರತದಲ್ಲಿ ಭಾಷಾವಾರು ಪ್ರಾಂತರಚನೆಯಾಗಿ ಕನ್ನಡ ಭಾಷೆಯನ್ನಾಡುವ ವಿಶಾಲ ಮೈಸೂರು ರಾಜ್ಯವು ೧೯೫೬ರಲ್ಲಿ ರೂಪಗೊಂಡಿತಷ್ಟೇ! ಅನಂತರ ತಮ್ಮ ಪ್ರಾಂತೀಯ ಸರಕಾರವು ಎರಡು ಮಹತ್ವದ ಕಾರ್ಯಗಳನ್ನೆಸಗಿದೆ.

(ಅ) **ಒತ್ತಾಯ ಶಿಕ್ಷಣ :** ಇದರನ್ವಯ ಆರು ವರ್ಷದಿಂದ ಹದಿನಾಲ್ಕು ವರುಷದೊಳಗಿನ ಬಾಲಕರಿಗೆ ಒತ್ತಾಯದಿಂದ ಪುಕ್ಕಟೆಯಾಗಿ ಪ್ರಾಥಮಿಕ ಶಿಕ್ಷಣವನ್ನು ಕೊಡಿಸುವ ಯೋಜನೆ ಮಾಡಿದೆ. ಮಾಧ್ಯಮಿಕ ಶಿಕ್ಷಣವನ್ನು ಒತ್ತಾಯದಿಂದಲ್ಲವಾದರೂ ಉಚಿತವಾಗಿ ಕೊಡುವುದಾಗಿ ರಾಜ್ಯ ಸರಕಾರವು ಘೋಷಿಸಿದೆ. ಈ ಯೋಜನೆಯಿಂದ ೧೯೭೫ ರೊಳಗಾಗಿ ನಾಡಿನ ಪ್ರಜರೆಲ್ಲರೂ ಸುಶಿಕ್ಷಿತರಾಗುವಂತೆ ಮಾಡುವ ಗುರಿಯಿಟ್ಟುಕೊಂಡಿದೆ.

(ಆ) **ಗ್ರಂಥಾಲಯ ಪ್ರಸರಣ :** ಪ್ರಜೆಗಳನ್ನು ಸುರಕ್ಷಿತರನ್ನಾಗಿ ಮಾಡುವುದರ ಜೊತೆಗೆ ಅವರು ತಮ್ಮ ಜ್ಞಾನವನ್ನು ಯಾವಜ್ಜೀವನವೂ ಅವಿರಿತವಾಗಿ ವೃದ್ಧಿಪಡಿಸಿಕೊಳ್ಳುತ್ತಾ ಹೋಗುವದಕ್ಕೆ ಸಹಕಾರಿಯಾದ ಗ್ರಂಥಾಲಯಗಳನ್ನು ನಾಡಿನ ತುಂಬಾ ಸ್ಥಾಪಿಸುವುದು ಎರಡನೆಯ ಗುರಿಯಾಗಿದೆ. ಈ ಗುರಿ ಸಾಧನೆಗೆ ಸರಕಾರಕ್ಕೆ ಸಾರ್ವಜನಿಕರಿಂದ ಸಂಪೂರ್ಣ ಸಹಾನುಭೂತಿ ದೊರೆತಿದೆಯೆಂದು ಬೇರೆ ಹೇಳಬೇಕಾಗಿಲ್ಲ.

ಮೇಲೆ ವಿವೇಚಿಸಿದ ವಿವರಣೆಯಿಂದ ನಾಡಿನ ನಾಲ್ಕು ನಿಟ್ಟಿನಿಂದ ಜನರು ಗ್ರಂಥಾಲಯ ಚಳುವಳಿಯಲ್ಲಿ ಬಹುಕಾಲದಿಂದ ಭಾಗ ವಹಿಸಿ ಅತ್ಯಂತ ಆಸ್ಥೆವಹಿಸಿ ಕಾರ್ಯೋನ್ಮುಖರಾಗಿರುವದರ ಅರಿವಾಗುತ್ತದೆ. ಪ್ರಜಾಪ್ರಭುತ್ವ ಸರಕಾರದಲ್ಲಿ ಪ್ರಜೆಗಳ ಈ ಬಗೆಯ ಆಶೋತ್ತರಗಳು ಈಡೇರುವುದು ಆಶ್ಚರ್ಯವೇನಲ್ಲ. ವಿಶಾಲ ಮೈಸೂರಿನ ವಿವಿಧ ಭಾಗಗಳಲ್ಲಿ ಪ್ರಚಾರದಲ್ಲಿರುವ ಭಿನ್ನ ಭಿನ್ನ ಗ್ರಂಥಾಲಯ ಆಡಳಿತ ವ್ಯವಸ್ಥೆಗಳನ್ನು ಏಕರೂಪ ದಲ್ಲಿ ತರುವದಕ್ಕಾಗಿ ಹೊಸ ಗ್ರಂಥಾಲಯಗಳನ್ನು ನಾಡಿನ ತುಂಬೆಲ್ಲ ಸ್ಥಾಪಿಸುವದಕ್ಕಾಗಿ ಮಾದರಿಯ ಗ್ರಂಥಾಲಯ ಕಾನೂ ನನ್ನು (Model Public Library Act) ರಚಿಸಲು ಪದ್ಮಶ್ರೀ ಡಾ. ರಂಗನಾಥನ್‌ರ ಅಧ್ಯಕ್ಷತೆಯಲ್ಲಿ ಸರಕಾರವು ಸಮಿತಿ ಯೊಂದನ್ನು ರಚಿಸಿತು (೧೯೬೨). ಸಮಿತಿಯು, ಮೈಸೂರು ಸಾರ್ವಜನಿಕ ಗ್ರಂಥಾಲಯಗಳ ಕಾನೂನನ್ನು ಸಿದ್ಧಪಡಿಸಿ ಸರ ಕಾರಕ್ಕೆ ಒಪ್ಪಿಸಿತು. ಅನಂತರ ೧೯೬೪ರ ಜೂನ ೧೭ ರಂದು ಈ ಕಾನೂನನ್ನು ಮೈಸೂರು ಶಾಸನ ಸಭೆಯ ಮುಂದೆ ಮಂಡಿ ಸಲಾಯಿತು. ಆದರೆ ಚರ್ಚೆಯ ನಂತರ ಅದರಲ್ಲಿ ಕಂಡುಬಂದ ದೋಷಗಳನ್ನು ನಿವಾರಿಸಿ ಪುನಃ ಮುಂದಿನ ಶಾಸನ ಸಭೆಯಲ್ಲಿ ಮಂಡಿಸಬೇಕೆಂದು ನಿರ್ಣಯಿಸಲಾಯಿತು. ೨೨ ಜನರ ಉಪ ಸಮಿತಿಯೊಂದು ಅದನ್ನು ಅವಲೋಕಿಸಿ ಅವಶ್ಯವೆನಿಸಿದ ತಿದ್ದುಪಡಿಗಳೊಂದಿಗೆ ೧೯೬೫ ಜನವರಿ ೨೫ ರಂದು ಶಾಸನ ಸಭೆಯು ಮುಂದಿಟ್ಟು ಸ್ವೀಕರಿಸಿತು. ಇದು ೧೯೬೫ನೆ ಜೂನ ತಿಂಗ ಳಲ್ಲಿ ಭಾರತ ರಾಷ್ಟ್ರಪತಿಗಳ ಅಂತಿಮ ಒಪ್ಪಿಗೆಯನ್ನು ಪಡೆದಿದೆ.

೧೯೬೬ನೆಯ ವರುಷ ಪ್ರಾರಂಭದಿಂದ ಕಂದಾಯ ವಸೂಲಿಯ ಕಾಲಕ್ಕೆ ಗ್ರಂಥಾಲಯ ಕರವನ್ನು ಸಂಗ್ರಹಿಸುವ ಕಾರ್ಯ ಪ್ರಾರಂಭಿಸಲಾಗಿದೆ. ಭಾರತದಲ್ಲಿ ಮೈಸೂರು ರಾಜ್ಯವು ಕಾಯದೆಯನ್ನು ಜಾರಿಗೆ ತಂದ ಎರಡನೆಯ ರಾಜ್ಯವಾಗಿದೆ.

ಈ ಕಾಯದೆಯಿಂದ ಆರಂಭದ ಆರು ವರ್ಷಗಳಲ್ಲಿ ಪ್ರತಿವರ್ಷ ೨೫ ಲಕ್ಷ ರೂಪಾಯಿಗಳನ್ನು ಸಾರ್ವಜನಿಕ ಗ್ರಂಥಾಲಯಗಳಿಗೆ ಸರಕಾರ ವೆಚ್ಚ ಮಾಡುತ್ತದೆ. ಕ್ರಮೇಣ ಈ ವೆಚ್ಚ ಹೆಚ್ಚಾಗಬಹುದು.

ಬೆಂಗಳೂರು ಪ್ರಾಂತೀಯ ಕೇಂದ್ರ ಗ್ರಂಥಾಲಯ,ಜಿಲ್ಲಾ ಗ್ರಂಥಾಲಯಗಳು, ತಾಲೂಕು ಗ್ರಂಥಾಲಯಗಳು, ಗ್ರಾಮ ಗ್ರಂಥಾಲಯಗಳು, ಚಲಿಸುವ ಗ್ರಂಥಾಲಯಗಳು, ಲಕ್ಷ ಜನ ಸಂಖ್ಯೆಯನ್ನು ಮೀರಿದ ಪಟ್ಟಣಗಳಿಗೆ ನಗರ ಗ್ರಂಥಾಲಯಗಳು– ಇತ್ಯಾದಿ; ಹೀಗೆ ಮೈಸೂರು ರಾಜ್ಯದ ತುಂಬೆಲ್ಲ ಗ್ರಂಥಾಲಯಗಳ ತೋರಣಗಳು ತೂಗಾಡುತ್ತವೆ. ನಾಡಿನ ಮೂಲೆ ಮೂಲೆಗಳಲ್ಲಿ ಈ ಜ್ಞಾನ ದಾಸೋಹ ಕೇಂದ್ರಗಳು ಸ್ಥಾಪಿತವಾಗಿ ಸಾರ್ವಜನಿಕರ ಸರ್ವೋದಯ ಕಾರ್ಯದಲ್ಲಿ ನಿರತವಾಗುತ್ತವೆ. ಆ ದಿನ ನಮಗೆಲ್ಲ ಸುದಿನ !

# ೩. ಶೈಕ್ಷಣಿಕ ಗ್ರಂಥಾಲಯಗಳು

## (i) ವಿಶ್ವವಿದ್ಯಾಲಯ ಗ್ರಂಥಾಲಯಗಳು

ಮಾನವನಲ್ಲಿ ಗುಪ್ತವಾಗಿರುವ ಶಕ್ತಿಗಳಿಗೆ ಸ್ಫೂರ್ತಿ ಚೈತನ್ಯಗಳನ್ನು ನೀಡಿ, ಪ್ರಕಟಪಡಿಸಿ ಇಹಜೀವನದಲ್ಲಿ ಸುಖ, ಶಾಂತಿ, ಸಮಾಧಾನಗಳನ್ನು ತಂದು ಕೊಡುವುದೇ ಉತ್ತಮ ಶಿಕ್ಷಣದ ಪರಮ ಧ್ಯೇಯ. ಈ ಉದಾತ್ತ ಧ್ಯೇಯವನ್ನು ಸಾಧಿಸುವಲ್ಲಿ ಮಾನವನಿಗೆ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಿಕ್ಷಣವನ್ನು ಹಂತ ಹಂತವಾಗಿ ಕೊಟ್ಟು ಸಂಶೋಧನ ಮಾರ್ಗದತ್ತ ಅವರ ಲಕ್ಷ್ಯವನ್ನು ಅಣಿಗೊಳಿಸಬೇಕಾಗುತ್ತದೆ. ಈ ಬಗೆಯ ಉಚ್ಚತಮ ಶಿಕ್ಷಣ ಕೊಟ್ಟು ಮಾನವನ ಹೃದಯ ಬುದ್ಧಿಗಳನ್ನು ಹದಗೊಳಿಸುವ ಸಂಸ್ಥೆಗಳೇ ವಿಶ್ವವಿದ್ಯಾಲಯಗಳು. ಜ್ಞಾನ ಸಂಗ್ರಹ, ಬೋಧನೆ, ಸಂಶೋಧನೆ, ಪ್ರಚಾರ, ಪ್ರಸಾರಗಳು ವಿಶ್ವವಿದ್ಯಾಲಯಗಳ ಪ್ರಮುಖ ಕಾರ್ಯಗಳು. ವಿಶ್ವವಿದ್ಯಾಲಯಗಳ ಈ ಉದಾತ್ತ ಕಾರ್ಯಗಳನ್ನು ಪೂರೈಸಿಕೊಡುವಲ್ಲಿ ಅವುಗಳ ಗ್ರಂಥಾಲಯಗಳು ಸಹ ಸಹಾಯ ಸಲ್ಲಿಸುತ್ತವೆ.

ಮೈಸೂರು ರಾಜ್ಯದಲ್ಲಿ ಇಂತಹ ನಾಲ್ಕು ವಿಶ್ವವಿದ್ಯಾನಿಲಯಗಳಿವೆ.

(ಅ) ಮೈಸೂರು ವಿಶ್ವವಿದ್ಯಾನಿಲಯ.

(ಆ) ಕರ್ನಾಟಕ ವಿಶ್ವವಿದ್ಯಾಲಯ.

(ಇ) ಬೆಂಗಳೂರು ವಿಶ್ವವಿದ್ಯಾನಿಲಯ
(ಈ) ಕೃಷಿ ವಿಶ್ವವಿದ್ಯಾನಿಲಯ.

## (ಅ) ಮೈಸೂರು ವಿಶ್ವವಿದ್ಯಾನಿಲಯ ಗ್ರಂಥಾಲಯ

ಇದು ೧೯೧೬ರಲ್ಲಿ ಆ ವಿಶ್ವವಿದ್ಯಾನಿಲಯ ಪ್ರಾರಂಭ ವಾದೊಡನೆ ಹುಟ್ಟಿ ಬೆಳೆದು ಬಂದಿದೆ. ನಮ್ಮ ನಾಡಿನ ಉಚ್ಚ ಶಿಕ್ಷಣ ಸಂಸ್ಥೆಯ ಅತ್ಯಂತ ಹಳೆಯ ಗ್ರಂಥಾಲಯವಿದು. ಈ ಗ್ರಂಥಾಲಯದಲ್ಲಿ ಹಳೆಯ ಅತ್ಯಮೂಲ್ಯ ಗ್ರಂಥಗಳಿವೆ. ಗ್ರಂಥ ಸಂಚಯ ಒಂದು ಲಕ್ಷಕ್ಕೂ ಮಿಕ್ಕಿದೆ. ಪ್ರತಿ ವರ್ಷ ಸುಮಾರು ೧೨೦೦ ನಿಯತಕಾಲಿಕೆಗಳನ್ನು ತರಿಸಲಾಗುತ್ತದೆ. ಇದರಲ್ಲಿ ಕನ್ನಡ ಸಾಹಿತ್ಯ, ಇತಿಹಾಸ, ಧರ್ಮ, ಕಲೆ, ಇವುಗಳ ಮೇಲಿನ ಅತ್ಯಮೂಲ್ಯ ಸಂಗ್ರಹವಿದೆ. ಇದರಂತೆ ಇನ್ನಿತರ ವಿಷಯ ಗಳ ಮೇಲೆಯೂ ಉತ್ತಮ ಹಳೆಯ ಗ್ರಂಥಗಳೂ ಇವೆ.

ಇಂದು ಈ ಗ್ರಂಥಾಲಯವು ಮಾನಸಗಂಗೋತ್ರಿಯಲ್ಲಿ ಆಧುನಿಕ ಸಲಕರಣೆ, ಸೌಲಭ್ಯಗಳಿಂದ ಸುಸಜ್ಜಿತವಾಗಿ ಕಟ್ಟಲ್ಪಟ್ಟ ನವೀನ ಕಟ್ಟಡದಲ್ಲಿ ಕಂಗೊಳಿಸುತ್ತಿದೆ. ಇದಕ್ಕೂ ಪೂರ್ವದಲ್ಲಿ ಹಳೆಯ ಕಟ್ಟಡ ಒಂದರಲ್ಲಿ ಮಹಾರಾಜ ಕಾಲೇಜಿನ ಬಳಿ ಗ್ರಂಥಾಲಯವಿತ್ತು. ಮೊದಲಿನ ಕಟ್ಟಡವು ಚಿಕ್ಕದಾದುದ ರಿಂದಲೂ ಆಧುನಿಕ ಸೌಕರ್ಯಗಳ ಅಭಾವದಿಂದಲೂ ಓದುಗರಿಗೆ ಸಾಕಷ್ಟು ಸೇವೆಯನ್ನು ಸಲ್ಲಿಸುವದು ಅಸಾಧ್ಯವಾಗಿತ್ತು. ಈ ಕಾರಣದಿಂದ ೧೯೬೫ರಲ್ಲಿ ಮಾನಸಗಂಗೋತ್ರಿಯಲ್ಲಿಯ ಹೊಸ ಕಟ್ಟಡಕ್ಕೆ ಇದನ್ನು ಸ್ಥಳಾಂತರಿಸಲಾಯಿತು.

**ನೌಕರ ವರ್ಗ :** ಈ ಗ್ರಂಥಾಲಯದಲ್ಲಿ ಮೊದಲು ತರಬೇತಿ ಪಡೆದ ಗ್ರಂಥಾಲಯ ಸಿಬ್ಬಂದಿವರ್ಗದವರು ಕಡಿಮೆ ಸಂಖ್ಯೆಯಲ್ಲಿ ಇರುತ್ತಿದ್ದರು. ಗ್ರಂಥಭಂಡಾರಿಯಾಗುವವನಿಗೆ ಗ್ರಂಥಾಲಯ ವಿಜ್ಞಾನದಲ್ಲಿ ತರಬೇತಿ ಪಡೆಯಬೇಕೆಂಬ ಕಡ್ಡಾಯವಿರಲಿಲ್ಲ. ವಿಶ್ವವಿದ್ಯಾನಿಲಯದ ಇಂಗ್ಲೀಷ ವಿಭಾಗದ ಪ್ರಾಧ್ಯಾಪಕರೊಬ್ಬರನ್ನು ಗ್ರಂಥಾಲಯದ ವ್ಯವಸ್ಥೆಯನ್ನು ನೋಡಿಕೊಳ್ಳಲು ನೇಮಿಸಲಾಗುತ್ತಿತ್ತು. ಅವರ ಸಹಾಯಕ ಗ್ರಂಥ ಭಂಡಾರಿ, ಕಾರಕೂನರು, ಪೇದೆಗಳು ಇವರಿಗೆ ಸಲಹೆ ಸೂಚನೆಗಳನ್ನಿತ್ತು ಮಾರ್ಗದರ್ಶನವನ್ನು ಮಾಡಿ ಗ್ರಂಥಾಲಯದ ಆಡಳಿತವು ಸುಗಮವಾಗಿ ಸಾಗುವಂತೆ ನೋಡಿಕೊಳ್ಳುತ್ತಿದ್ದರು. ಆದರೂ ಪ್ರಾಧ್ಯಾಪಕರಿಗೆ ಗ್ರಂಥಾಲಯ ವಿಜ್ಞಾನದಲ್ಲಿ ಯೋಗ್ಯ ತರಬೇತಿ ಇಲ್ಲದಿದ್ದುದರಿಂದ ಗ್ರಂಥಾಲಯದ ಮಹತ್ವದ ಸೇವೆಯನ್ನು ಓದುಗರಿಗೆ ಒದಗಿಸುವದರಲ್ಲಿ ಬಹು ತೊಂದರೆಯಾಗುತ್ತಿತ್ತು. ಈ ಎಲ್ಲ ತೊಂದರೆಗಳನ್ನರಿತು ಇತ್ತೀಚೆಗೆ ಮೊದಲಿನ ಪ್ರಾಧ್ಯಾಪಕರ ನೇಮಕವು ಮಾಯವಾಗಿ ಗ್ರಂಥಾಲಯ ಶಾಸ್ತ್ರದಲ್ಲಿ ಬಲ್ಲಿದರಾದ ಅನುಭವಿಕ ವ್ಯಕ್ತಿಗಳನ್ನು ಗ್ರಂಥ ಭಂಡಾರಿಯನ್ನಾಗಿ ನೇಮಿಸುವದು ರೂಢಿಯಲ್ಲಿ ಬಂದಿತು. ಅದರನ್ವಯ ಕರ್ನಾಟಕ ವಿಶ್ವವಿದ್ಯಾಲಯದ ಅಂದಿನ ಗ್ರಂಥ ಭಂಡಾರಿಗಳಾದ ಶ್ರೀ ಕೆ. ಎಸ್. ದೇಶಪಾಂಡೆಯವರ ಸೇವೆಯನ್ನು ಎರಡು ವರ್ಷಗಳ ವರೆಗೆ ಎರವಲಾಗಿ ಕೊಡಲಾಗಿತ್ತು. ಅವರು ೧೯೬೭ರ ವರೆಗೆ ಅದರ ಮುಖ್ಯ ಗ್ರಂಥಭಂಡಾರಿಗಳೆಂದು ಸೇವೆ ಸಲ್ಲಿಸಿದರು. ಇವರು ತಮ್ಮ ಕಾಲಾವಧಿಯಲ್ಲಿ ಅನೇಕ

ಮಹತ್ವದ ಬದಲಾವಣೆಗಳನ್ನು ಮಾಡಿದರು. ಹಳೆಯ ಕಟ್ಟಡದಿಂದ ಮಾನಸ ಗಂಗೋತ್ರಿಯಲ್ಲಿಯ ಹೊಸ ಕಟ್ಟಡಕ್ಕೆ ಗ್ರಂಥಾಲಯವು ಸ್ಥಳಾಂತರವಾದದ್ದು ಇವರ ಕಾಲದಲ್ಲಿಯೇ. ವಿಶ್ವವಿದ್ಯಾನಿಲಯದ ಅನೇಕ ವಿಭಾಗಗಳಲ್ಲಿ ಇದ್ದ ಪ್ರತ್ಯೇಕವಾಗಿ ಸಂಗ್ರಹಿಸಿದ ಗ್ರಂಥಗಳನ್ನೇ ಒಂದೆಡೆಗೆ ತಂದು ಆಧುನಿಕ ಶಾಸ್ತ್ರೀಯ ಪದ್ಧತಿಯ ಮೇಲೆ ಅವುಗಳನ್ನು ವರ್ಗೀಕರಣ, ಸೂಚೀಕರಣ ಮಾಡಹತ್ತಿದರು. ಆ ಕಾರ್ಯ ಮುಂದುವರಿದಿದೆ. ಗ್ರಂಥಾಲಯದಲ್ಲಿ ಉತ್ತಮ ಪೀಠೋಪಕರಣಗಳನ್ನು ಒದಗಿಸಲಾಗಿದೆ.

ಗ್ರಂಥಾಲಯವು ಬೆಳಗಿನ ೮ ಗಂಟೆಯಿಂದ ರಾತ್ರಿ ೮ ಗಂಟೆಯ ವರೆಗೆ ತೆರೆಯುತ್ತದೆ. ರಜೆಯ ದಿನಗಳಲ್ಲಿ ಬೆಳಗಿನ ೧೦–೩೦ರಿಂದ ಸಂಜೆಯ ೫–೩೦ ಗಂಟೆಯ ವರೆಗೆ ತೆರೆಯಲ್ಪಟ್ಟಿರುತ್ತದೆ. ವರ್ಷದಲ್ಲಿ ಸುಮಾರು ೩೬೦ ದಿವಸ ಗ್ರಂಥಾಲಯವನ್ನು ತೆರೆದಿಡಲಾಗುತ್ತದೆ.

ಪ್ರತಿ ದಿವಸ ಸುಮಾರು ೨೦೦ ವಿದ್ಯಾರ್ಥಿಗಳು ಈ ಗ್ರಂಥಾಲಯದ ಉಪಯೋಗವನ್ನು ಮಾಡಿಕೊಳ್ಳುತ್ತಾರೆ. ಇದೇ ವರ್ಷ ೨೧೮೭ ಸ್ನಾತಕೋತ್ತರ ವಿದ್ಯಾರ್ಥಿಗಳು ಈ ಗ್ರಂಥಾಲಯದ ಓದುಗರಾಗಿ ಹೆಸರು ನೊಂದಾಯಿಸಿದರು. ಪ್ರಸ್ತುತ ವರ್ಷದಲ್ಲಿ ೪೫,೦೦೦ ಓದುಗರು ಉಪಯೋಗ ಮಾಡಿಕೊಂಡಿದ್ದಾರೆ.

ಈ ಗ್ರಂಥಾಲಯವು ದೇಶದ ಇನ್ನಿತರ ಗ್ರಂಥಾಲಯಗಳಿಗೆ ಗ್ರಂಥಗಳನ್ನು ಎರವಲಾಗಿ ಕೊಡುತ್ತದೆ. ಅದೇ

ರೀತಿ ತನ್ನ ಓದುಗರಿಗೆ ತನ್ನಲ್ಲಿಲ್ಲದ ಗ್ರಂಥಗಳನ್ನು ಬೇರೆ ಗ್ರಂಥಾಲಯಗಳಿಂದ ತರಿಸಿಕೊಡುತ್ತದೆ. ಇದರ ಜೊತೆಗೆ ಬೇರೆ ಬೇರೆ ಉತ್ತಮ ನಿಯತಕಾಲಿಕಗಳಲ್ಲಿ ಪ್ರಕಟವಾದ ಲೇಖನಗಳ ಪ್ರತಿಗಳನ್ನು ಮೈಕ್ರೊಫಿಲ್ಮ ರೂಪದಲ್ಲಿ ತರಿಸಿ ಓದುಗರ ಸಂಶೋಧನೆಯಲ್ಲಿ ಸಹಾಯ ಮಾಡುತ್ತದೆ. ದಿಲ್ಲಿಯ ರಾಷ್ಟ್ರೀಯ ವೈಜ್ಞಾನಿಕ ಗ್ರಂಥ ಸಂಶೋಧನ ಕೇಂದ್ರದವರು ಇಂತಹ ಲೇಖನದ ಮೈಕ್ರೊಫಿಲ್ಮ ಪ್ರತಿಗಳನ್ನು ಓದುವದಕ್ಕಾಗಿ ಯಂತ್ರವನ್ನು ಈ ಗ್ರಂಥಾಲಯಕ್ಕೆ ಎರವಲಾಗಿ ಕೊಟ್ಟಿದ್ದಾರೆ. ಸಂಶೋಧನ ವಿದ್ಯಾರ್ಥಿಗಳಿಗೆ ಇದೊಂದು ವರದಾನವಾಗಿ ಪರಿಣಮಿಸಿದೆ.

## ಗ್ರಂಥಗಳ ಆಯ್ಕೆ ಮತ್ತು ಸಂಗ್ರಹಣೆ :

ಈ ಗ್ರಂಥಾಲಯವು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ಪ್ರಾಧ್ಯಾಪಕರಿಗೆ ಬೇಕಾಗುವ ಮೇಲ್ತರಗತಿಯ ಗ್ರಂಥಗಳನ್ನು ಗ್ರಂಥಾಲಯಕ್ಕೆ ಕೊಡು-ಕೊಳ್ಳಲಾಗುತ್ತದೆ. ಪ್ರತಿ ವರ್ಷ ೧೦ ಸಾವಿರಕ್ಕೆ ಮಿಕ್ಕಿ ಗ್ರಂಥಗಳನ್ನು ಶೇಖರಿಸಲಾಗುತ್ತದೆ. ಕನ್ನಡದಲ್ಲಿ ಪ್ರಕಟವಾದ ಯಾವದೇ ಗ್ರಂಥವನ್ನು ನೇರವಾಗಿ ಲೇಖಕರಿಂದಾಗಲಿ ಪ್ರಕಾಶಕರಿಂದಾಗಲಿ, ಅಥವಾ ವ್ಯಾಪಾರಸ್ಥರಿಂದಾಗಲಿ ಕೊಂಡುಕೊಳ್ಳುವ ವಿಶೇಷ ವ್ಯವಸ್ಥೆ ಮಾಡಲಾಗಿದೆ. ಇದರನ್ವಯ ಕಳೆದ ವರ್ಷ ೩,೫೪೪ ಕನ್ನಡ ಗ್ರಂಥಗಳನ್ನು ಕೊಂಡುಕೊಳ್ಳಲಾಗಿದೆ. ಪ್ರತಿ ವರ್ಷ ಸಾವಿರಾರು ಗ್ರಂಥಗಳು ಬೇರೆ ಬೇರೆ ಸಂಸ್ಥೆಗಳಿಂದ ಪುಕ್ಕಟೆಯಾಗಿ

ಕೊಡಲ್ಪಡುತ್ತವೆ. ಹೀಗೆ ದಾನದತ್ತಿಗಳ ರೂಪದಿಂದ ಬಂದ ಈ ಗ್ರಂಥಗಳನ್ನು ಬಹು ಗೌರವದಿಂದ ಗ್ರಂಥಾಲಯವು ಸ್ವೀಕರಿಸುತ್ತದೆ. ಪ್ರತ್ಯುಪಕಾರವಾಗಿ ಕೆಲವು ಗ್ರಂಥಗಳನ್ನು ಬೇರೆ ಸಂಸ್ಥೆಗಳಿಗೆ ವಿಶ್ವವಿದ್ಯಾನಿಲಯವು ಗ್ರಂಥಗಳನ್ನು ಕೊಡುತ್ತದೆ. ಕೀವ್ಲ ಯುನಿವ್ಹರ್ಸಿಟಿಯವರು ಕೊಟ್ಟ ಗ್ರಂಥಗಳಿಗೆ ಪ್ರತಿಯಾಗಿ ಸುಮಾರು ೧ ಸಾವಿರ ರೂಪಾಯಿ ಮೊತ್ತದ ಭಾರತದ ಇತಿಹಾಸ, ಸಂಸ್ಕೃತಿ, ಸಾಹಿತ್ಯಗಳನ್ನು ವಿವರಿಸುವ ಗ್ರಂಥಗಳನ್ನು ಕೀವ್ಲ ಸ್ಟೇಟ್ ಯುನಿವ್ಹರ್ಸಿಟಿ ಗ್ರಂಥಾಲಯಕ್ಕೆ ಕಳಿಸಲಾಗಿದೆ.

**ಪ್ರಕಾಶಕ-ಗ್ರಂಥಾಲಯ ಯೋಜನೆ:** ( Dealer Library Plan) : ಇದರನ್ವಯ ಉತ್ತಮ ಗ್ರಂಥಗಳನ್ನು ನೇರವಾಗಿ ಪ್ರಕಾಶಕರಿಂದ ಕೊಳ್ಳಲಾಗುತ್ತದೆ.

ಗ್ರಂಥೇತರ ಓದುವ ಸಾಧನಗಳಾದ ನಕಾಶಗಳು, ಫೋಟೋ ಪ್ರತಿಗಳು, ರಿಕಾರ್ಡಗಳು ಈ ಗ್ರಂಥಾಲಯದಲ್ಲಿವೆ.

**ನಿಯತಕಾಲಿಕಗಳು :** ಪ್ರತಿವರ್ಷ ಸುಮಾರು ೧ ಲಕ್ಷ ೩೫ ಸಾವಿರ ರೂಪಾಯಿ ಕಿಮ್ಮತ್ತಿನ ೧೦೦೦ ನಿಯತಕಾಲಿಕೆಗಳನ್ನು ಕೊಂಡುಕೊಳ್ಳಲಾಗುತ್ತದೆ. ೨೦೦ ನಿಯತಕಾಲಿಕೆಗಳು ಪ್ರಕ್ಕಟೆಯಾಗಿ ಬರುತ್ತವೆ.

ಮಹತ್ವದ ಹಳೆಯ ಗ್ರಂಥಗಳನ್ನು, ಸಂದರ್ಭ ಗ್ರಂಥಗಳನ್ನು ಸಂಶೋಧನ ಪ್ರಬಂಧಗಳನ್ನು, ಪಠ್ಯ ಪುಸ್ತಕಗಳನ್ನು

ಪ್ರತ್ಯೇಕಿಸಿಟ್ಟು ವಿದ್ಯಾರ್ಥಿಗಳಿಗೆ ಅವಲೋಕಿಸಲು ಅನುಕೂಲತೆ ಯನ್ನು ಮಾಡಿಕೊಡಲಾಗಿದೆ.

ಪತ್ರಿಕೆಗಳಲ್ಲಿ ಬಂದ ಯಾವದೊಂದು ವಿಷಯದ ಮೇಲಿನ ಲೇಖನ ಸೂಚಿಯನ್ನು ಸಿದ್ಧಪಡಿಸಿ ಸಂಶೋಧಕ ವಿದ್ಯಾರ್ಥಿ ಗಳಿಗೆ ಕೊಡಲಾಗುವದು.

ವರ್ಗೀಕರಣ : ಡ್ಯೂಯಿಯ ದಶಾಂಶ ವರ್ಗೀಕರಣ ಪದ್ಧತಿಯನ್ನು ಅನುಸರಿಸಿ ಗ್ರಂಥಗಳನ್ನು ವಿಭಜಿಸಲಾಗಿದೆ. ಅಮೇರಿಕನ್ ಲೈಬ್ರರಿ ಅಸೊಸಿಯೇಶನ್ ಸೂಚೀಕಲ್ಪದ ಪ್ರಕಾರ ಗ್ರಂಥಗಳ ಸೂಚಿಯನ್ನು ಸಿದ್ಧಮಾಡಲಾಗುತ್ತಿದೆ. ೧೯೬೫ರಿಂದ ಇತ್ತೀಚೆಗೆ ಕೊಂಡುಕೊಂಡ ಗ್ರಂಥಗಳನ್ನು ವರ್ಗೀಕರಿಸಲಾಗಿದೆ. ಉಳಿದ ಹಿಂದಿನ ಗ್ರಂಥಗಳನ್ನು ಸಹ ವರ್ಗೀಕರಿಸಿ ಲೇಖಕ ಸೂಚಿಯನ್ನು ಸಿದ್ಧಪಡಿಸಲಾಗಿದೆ. ವರ್ಗೀಕರಣ ಮಾಡ ಬೇಕಾದ ಗ್ರಂಥಗಳ ಸಂಖ್ಯೆ ಇನ್ನೂ ದೊಡ್ಡದಿದೆ. ಕಾರ್ಡುಗಳನ್ನು ಮುದ್ರಣ ಮಾಡಲಾಗುತ್ತಿದೆ.

ಸ್ನಾತಕೋತ್ತರ ವಿಭಾಗಗಳಲ್ಲಿ ಪ್ರತ್ಯೇಕವಾಗಿಟ್ಟ ಗ್ರಂಥ ಗಳ ಹಾಗೂ ವಿಶ್ವವಿದ್ಯಾಲಯ ಆಡಳಿತಕ್ಕೊಳಪಟ್ಟ ಕಾಲೇಜ ಗ್ರಂಥಾಲಯಗಳ ಗ್ರಂಥಗಳ ಸಂಯುಕ್ತ ಸೂಚಿಯೊಂದನ್ನು ಸಿದ್ಧಪಡಿಸಿ ಇಲ್ಲಿ ಇಡಲಾಗಿದೆ. ಸರಕಾರಿ ಪ್ರಕಟನೆ ಹಾಗೂ ರಿಪೋರ್ಟುಗಳನ್ನು ಪುನಃ ಸೂಚೀಕರಣ ಮಾಡುವ ಕಾರ್ಯ ಪ್ರಾರಂಭವಾಗಿದೆ.

ಕನ್ನಡ ಗ್ರಂಥಗಳು : ಕನ್ನಡ ಭಾಷೆಯು ಸಾವಕಾಶ ವಾಗಿ ವಿಶ್ವವಿದ್ಯಾಲಯಗಳಲ್ಲಿ ಬೋಧ ಭಾಷೆಯ ಸ್ಥಾನವನ್ನು

ಅಲಂಕರಿಸಹತ್ತಿದೆ. ಈ ದೃಷ್ಟಿಯಿಂದ ಕನ್ನಡದಲ್ಲಿ ಪ್ರಕಟವಾದ ಎಲ್ಲ ಗ್ರಂಥಗಳನ್ನು ಸಂಗ್ರಹಿಸುವ ಕಾರ್ಯವನ್ನು ಕೈಕೊಳ್ಳಲಾಗಿದೆ. ಈ ವಿಭಾಗಕ್ಕೆ ಒಬ್ಬ ಸಹಾಯಕ ಗ್ರಂಥಭಂಡಾರಿಯನ್ನು ನೇಮಿಸಲಾಗಿದೆ. ಈ ಸಂಗ್ರಹದಲ್ಲಿ ೧೮ ಸಾವಿರ ಕನ್ನಡ ಗ್ರಂಥಗಳು ಇವೆ. ಶ್ರೀ ತಿ. ನಂ. ಶ್ರೀಕಂಠಯ್ಯನಂವರಂಥ ಕನ್ನಡ ಪಂಡಿತೋತ್ತಮರು ಸಂಗ್ರಹಿಸಿದ ಅತ್ಯಮೂಲ್ಯ ಗ್ರಂಥಗಳು ದಾನವಾಗಿ ಈ ವಿಭಾಗಕ್ಕೆ ಕೊಡಲ್ಪಟ್ಟಿವೆ. ಕರ್ನಾಟಕದಲ್ಲಿ ಇಂತಹ ಅಮೂಲ್ಯ ಗ್ರಂಥಗಳ ಸಂಗ್ರಹ ಇದೊಂದೇ ಎಂದು ಹೇಳಬಹುದು.

ವಿಶ್ವವಿದ್ಯಾಲಯ ಆಡಳಿತಕ್ಕೊಳಪಟ್ಟ ಯುವರಾಜ ಕಾಲೇಜ,ಮಹಾರಾಜ ಕಾಲೇಜುಗಳ ವಿದ್ಯಾರ್ಥಿಗಳಿಗಾಗಿ ಒಂದು ಪ್ರತ್ಯೇಕ ಗ್ರಂಥಾಲಯವನ್ನು ತೆರೆಯಲಾಗಿದೆ. ವಿವಿಧ ವಿಷಯಗಳಿಗೆ ಸಂಬಂಧಿಸಿದ ೧ ಲಕ್ಷಕ್ಕೂ ಮಿಕ್ಕಿ ಗ್ರಂಥಗಳು ಇಲ್ಲಿವೆ. ಒಬ್ಬ ಉಪಗ್ರಂಥಭಂಡಾರಿ ಹಾಗೂ ಇಬ್ಬರು ಸಹಾಯಕ ಗ್ರಂಥಭಂಡಾರಿಗಳು ಇತರ ಸಿಬ್ಬಂದಿಯೊಂದಿಗೆ ಕೆಲಸ ಮಾಡುತ್ತಿದ್ದಾರೆ. ಪ್ರತಿವರ್ಷ ಮೇಲಾಡಳಿತೆಯನ್ನು ವಿಶ್ವವಿದ್ಯಾನಿಲಯದ ಗ್ರಂಥಭಂಡಾರಿಯೇ ನೋಡಿಕೊಳ್ಳುತ್ತಾನೆ. ಸುಮಾರು ಪ್ರತಿವರ್ಷ ೪೦ ಸಾವಿರ ರೂಪಾಯಿಗಳನ್ನು ಗ್ರಂಥ ಹಾಗೂ ನಿಯತಕಾಲಿಕಗಳನ್ನು ಕೊಳ್ಳಲು ವ್ಯಯಿಸಲಾಗುತ್ತದೆ. ಪ್ರತಿದಿನವು ಇಲ್ಲಿ ೫೦೦ ಗ್ರಂಥಗಳನ್ನು ಮನೆಗೆ ಓದಲು ಕೊಡಲಾಗುತ್ತದೆ. ಪ್ರತ್ಯೇಕ ಪಠ್ಯಪುಸ್ತಕ ವಿಭಾಗವನ್ನು ತೆರೆಯಲಾಗಿದೆ.

ಗ್ರಂಥಾಲಯಕ್ಕೆ ಸಂಬಂಧಪಟ್ಟ ಚಲನಚಿತ್ರಗಳನ್ನು ಆಗಾಗ ತೋರಿಸಲಾಗುವದು.

## (ಆ) ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯ :

ನಮ್ಮ ನಾಡಿನ ಶ್ರೇಷ್ಠ ಶೈಕ್ಷಣಿಕ ಗ್ರಂಥಾಲಯಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಒಂದು. ಈ ಗ್ರಂಥಾಲಯದ ಅಭ್ಯುದಯ ಹಾಗೂ ನಾವೀನ್ಯತೆಗೆ ಮೂಲಕಾರಣರಾದವರು ಶ್ರೀ ಕೆ. ಎಸ್. ದೇಶಪಾಂಡೆ ಮತ್ತು ಶ್ರೀ ಎಂ. ಆರ್. ಕುಂಭಾರ ಅವರು. ಶ್ರೀ ಕುಂಭಾರರು ಸದ್ಯದ ಗ್ರಂಥಭಂಡಾರಿಯಾಗಿ ರುವರು. ಶ್ರೀ ದೇಶಪಾಂಡೆಯವರು ಕುಂಭಾರವರ ಮುನ್ನ ಗ್ರಂಥಭಂಡಾರಿಗಳಾಗಿದ್ದರು. ಇವರಿಬ್ಬರು ಗ್ರಂಥಾಲಯವನ್ನು ಬಹು ಶ್ರಮವಹಿಸಿ ಸುವ್ಯವಸ್ಥೆಗೊಳಿಸಿದರು. ಇವರ ಶ್ರಮದ ಪ್ರತೀಕವಾಗಿ ಇಂದು ಇದರ ಸೇವೆ ಸಕಲರ ಪ್ರಶಂಸೆಗೆ ಪಾತ್ರ ವಾಗಿದೆ. ಇದು ಪ್ರಾರಂಭವಾದುದು ೧೯೫೦ರಲ್ಲಿ. ಪ್ರಾರಂಭ ದಲ್ಲಿ ಇದರ ಗ್ರಂಥ ಸಂಚಯ ೧೦ ಸಾವಿರ. ಅಂದಿನ ಆರಂಭದ ವರುಷಗಳಲ್ಲಿ ಕೆಲವು ಗಣ್ಯವ್ಯಕ್ತಿಗಳು ತಮ್ಮ ಸ್ವಂತ ಸಂಗ್ರಹ ದಿಂದ ಉತ್ತಮ ಗ್ರಂಥಗಳನ್ನು ಈ ಗ್ರಂಥಾಲಯಕ್ಕೆ ಉದಾರ ದೇಣಿಗೆಯಾಗಿತ್ತಿರುವರು. ಅಂತಹರಲ್ಲಿ ಅಂದಿನ ಮುಧೋಳ ಸಂಸ್ಥಾನದ ಒಡೆಯರ ಹೆಸರನ್ನು ಮರೆಯುವಂತಿಲ್ಲ. ಅವರು ೨೫೦೦ ಅತ್ಯಮೂಲ್ಯ ಗ್ರಂಥಗಳನ್ನು ಕೊಟ್ಟು ಸಹಾಯ ಮಾಡಿದರು. ಮೊದಲು ಧಾರವಾಡದ ಗಂಡು ಮಕ್ಕಳ ಟ್ರೇನಿಂಗ ಕಾಲೇಜಿನಲ್ಲಿ ಕಾರ್ಯ ಪ್ರಾರಂಭಿಸಿದ್ದ ಗ್ರಂಥಾಲಯವು

೧೯೫೫ ಜೂನ ತಿಂಗಳಲ್ಲಿ ಭೋಟಾ ಮಹಾಬಳೇಶ್ವರದಲ್ಲಿ ನಿರ್ಮಾಣವಾದ ವಿಶ್ವವಿದ್ಯಾಲಯುದ ಶೈಕ್ಷಣಿಕ ಕಟ್ಟಡಕ್ಕೆ ಸ್ಥಳಾಂತರಿಸಲ್ಪಟ್ಟಿತು. ಸದ್ಯದ ಗ್ರಂಥಾಲಯುದಲ್ಲಿ ೧೨೦ × ೪೦ ಪೂ. ಉದ್ದಗಲದ ಮೂರು ಓದುವ ಕೋಣೆಗಳಿವೆ.

ಪ್ರತಿ ದಿವಸ ಸುಮಾರು ೫೦೦ ವಿದ್ಯಾರ್ಥಿಗಳು ಇಲ್ಲಿ ಗ್ರಂಥಾವಲೋಕನ ಮಾಡುತ್ತಾರೆ. ೩೦೦ ಗ್ರಂಥಗಳನ್ನು ಮನೆಗೆ ಓದಲು ಎರವಲಾಗಿ ಕೊಡಲಾಗುತ್ತದೆ. ಬೆಳಗಿನ ೮॥ ಗಂಟೆಯಿಂದ ರಾತ್ರಿ ೯॥ ಗಂಟೆಯು ವರೆಗೆ ಗ್ರಂಥಾಲಯುವನ್ನು ತೆರೆದಿಟ್ಟಿರುತ್ತದೆ. ರಜೆ ದಿನಗಳಲ್ಲಿ ಮಾತ್ರ ೧೦॥ ಯಿಂದ ೫॥ ಗಂಟೆಯು ವರೆಗೆ ತೆರೆದಿರುತ್ತದೆ. ವರ್ಷದ ೩೬೦ ದಿನಗಳಲ್ಲಿ ಗ್ರಂಥಾಲಯುವು ತನ್ನ ಸೇವೆಯುನ್ನು ಓದುಗರಿಗೆ ಅವ್ಯಾಹತವಾಗಿ ಸಲ್ಲಿಸುತ್ತದೆ. ವಾರ್ಷಿಕ ಪರೀಕ್ಷೆಗಳ ಮುನ್ನ ನಾಲ್ಕು ತಿಂಗಳ– ಅಂದರೆ ಜನವರಿಯಿಂದ ಎಪ್ರಿಲ್ ತಿಂಗಳ ವರೆಗೆ ರಜೆಯು ದಿನಗಳಲ್ಲಿಯೂ ಸಹ ಗ್ರಂಥಾಲಯುವು ಬೆಳಗಿನ ೮॥ ಯಿಂದ ರಾತ್ರಿ ೯॥ ಗಂಟೆಯು ವರೆಗೆ ತನ್ನ ಸೇವೆಯುನ್ನು ಸಲ್ಲಿಸುತ್ತದೆ.

ಓದುಗರ ಬೇಡಿಕೆಯುನ್ನನುಸರಿಸಿ ಕೊಳ್ಳಲಾದ ಗ್ರಂಥಗಳ ಸಂಖ್ಯೆ ಇಲ್ಲಿ ಹೆಚ್ಚು. ಆದರೆ ಜ್ಞಾನವೃಕ್ಷದ ಸಕಲ ಶಾಖೆಗಳ ಬಗೆಗಿನ ಗ್ರಂಥಗಳನ್ನು ಸಾಧ್ಯವಾದಷ್ಟು ಸಂಗ್ರಹಿಸುವದರ ಕಡೆಗೂ ಲಕ್ಷ್ಯಪೂರೈಸಲಾಗಿದೆ. ಇಂದಿನ ಸಂಗ್ರಹ ೧ ಲಕ್ಷಕ್ಕೂ ಮೀರಿದೆ. ಜ್ಞಾನಸಂಗ್ರಹದ ಇನ್ನಿತರ ಸಾಧನ ಸಲಕರಣೆಗಳಾದ ಲಿಂಗ್ವಾಫೋನ್ ಮತ್ತು ಲಾಂಗಪ್ಲೇಯಿಂಗ ರಿಕಾರ್ಡ

ಗಳಿವೆ. ಸೂಕ್ಷ್ಮ ಪತ್ರಕ (Microc-ard) ಮೈಕ್ರೊಫಿಲ್ಮ ಗಳಲ್ಲಿ ಸಹ ಮಹತ್ವದ ಪತ್ರಿಕೆಗಳ ಹಾಗೂ ಗ್ರಂಥಗಳ ಪ್ರತಿ ಗಳನ್ನು ಸಂಗ್ರಹಿಸಿಡಲಾಗಿದೆ. ಆಯ್. ಎ. ಎಸ್. ಪರೀಕ್ಷೆ ಗಳಿಗೆ ಕೂಡ್ರುವ ವಿದ್ಯಾರ್ಥಿಗಳಿಗೆ ಕುಳಿತು ಅಭ್ಯಾಸ ಮಾಡಲು ಪ್ರತ್ಯೇಕ ವ್ಯವಸ್ಥೆಯನ್ನು ಮಾಡಲಾಗಿದೆ. ಸಂಶೋಧಕ ವಿದ್ಯಾ ರ್ಥಿಗಳಿಗೆ ವಿಶೇಷತರದ ಗ್ರಂಥಗಳ ಹಾಗೂ ಪೀಠೋಪಕರಣ ಗಳಿಂದ ಸಜ್ಜುಗೊಳಿಸಿದ ಪ್ರತ್ಯೇಕ ಸ್ಥಳವು ಬೇರೊಂದೆಡೆ ಯಲ್ಲಿದೆ.

ಸಂಯುಕ್ತರಾಷ್ಟ್ರ ಸಂಘದ ಪ್ರಕಟನೆಗಳ ಸಂಗ್ರಹ ಕೇಂದ್ರ ವನ್ನು (Depository centre) ೧೯೬೭ ಸಪ್ಟಂಬರದಿಂದ ಇಲ್ಲಿ ತೆರೆಯಲಾಗಿದೆ. ಭಾರತದ ಕೇವಲ ೧೨ ಕೇಂದ್ರಗಳಲ್ಲಿ ಇದೊಂದು. ಸಂಶೋಧಕರಿಗೆ ಅತ್ಯುಪಯುಕ್ತ ಕೇಂದ್ರವಿದು.

ವಿಶ್ವವಿದ್ಯಾಲಯಗಳ ಗ್ರಂಥಾಲಯಗಳು ಅಂದಂದಿನ ವರೆಗೆ ಮೂಡಿ ಬಂದ ನವೀನ ವಿಷಯಗಳ ಬಗೆಗಿನ ಜ್ಞಾನ ವನ್ನೆಲ್ಲ ಸಂಶೋಧಕರಿಗೆ ಒದಗಿಸಿ ಕೊಡುವದು ಅತ್ಯವಶ್ಯ. ಇದನ್ನರಿತ ಕರ್ನಾಟಕ ವಿಶ್ವವಿದ್ಯಾಲಯ ಗ್ರಂಥಾಲಯವು ಪ್ರತಿ ವರ್ಷ ವಿವಿಧ ವಿಷಯಗಳನ್ನು ಕುರಿತು ವಿವಿಧ ಭಾಷೆಗಳಲ್ಲಿ ಪ್ರಕಟವಾಗುವ ಮಾಸಿಕ, ತ್ರೈಮಾಸಿಕ ೧೧೦೦ ಉತ್ತಮೋ ತ್ತಮ ನಿಯತಕಾಲಿಕೆಗಳನ್ನು ತರಿಸುತ್ತದೆ. ಇದಕ್ಕಾಗಿ ವರ್ಷಕ್ಕೆ ೧ ಲಕ್ಷ ರೂಪಾಯಿ ಚಂದಾ ಹಣವನ್ನು ಕಳಿಸುತ್ತದೆ.

ಗ್ರಂಥಾಲಯದ ಆಡಳಿತೆಯಲ್ಲಿ ಗ್ರಂಥಪಾಲರಿಗೆ ಸಹಾಯ ಮಾಡಲು "ಗ್ರಂಥಾಲಯ ಮಂಡಳಿ" ಯೊಂದಿದೆ.

ಅದರ ಸದ್ಯದ ಚೇರಮನ್ನರು ಶ್ರೀ ಎಂ. ಎಸ್. ಸುಗಂಧಿಯವ ರಿದ್ದಾರೆ. ಗ್ರಂಥಾಲಯದ ಸರ್ವತೋಮುಖ ಏಳ್ಗೆಗಾಗಿ ಬಹು ಕಳಕಳಿಯಿಂದ ಶ್ರಮಿಸುತ್ತಿದ್ದಾರೆ.

ಗ್ರಂಥಗಳ ವರ್ಗೀಕರಣ ಹಾಗೂ ಸೂಚೀಕರಣಗಳು ಪದ್ಮಶ್ರೀ ರಂಗನಾಥರ್‌ರ "ದ್ವಿಬಿಂದು ವರ್ಗೀಕರಣ ಪದ್ಧತಿ" ಮತ್ತು "ಅನುವರ್ಗ ಸೂಚೀಕಲ್ಪ" ಗಳ ನಿಯಮಾನುಸಾರ ಮಾಡಲ್ಪಡುತ್ತವೆ. 1) Your Library 2) Guide to pe·iodical Literature 3) New Additions- ಇವುವಾಚಕ ರಿಗೆ ಗ್ರಂಥಾಲಯ ಉಪಯೋಗವನ್ನು ಮಾಡಿಕೊಳ್ಳುವಲ್ಲಿ ಸಹಾಯಕವಾದ ಪ್ರಕಟನೆಗಳು.

ಧಾರವಾಡ ಸುತ್ತಮುತ್ತ ೨೦೦ ಮೈಲುಗಳ ಅಂತರದಲ್ಲಿ ಇಂತಹ ಉತ್ತಮ ಗ್ರಂಥಾಲಯ ಇದೊಂದೇ.

## ಇ) ಬೆಂಗಳೂರು ವಿಶ್ವವಿದ್ಯಾನಿಲಯ ಗ್ರಂಥಾಲಯ:

ಇದು ಅಸ್ತಿತ್ವದಲ್ಲಿ ಬಂದು ಐದು ವರ್ಷವಾಯಿತು. ಗ್ರಂಥಾಲಯವನ್ನು ಕಟ್ಟುವದಕ್ಕೆ ಧನ ಸಹಾಯ ಆಯೋಗ ದಿಂದ ಸಾಕಷ್ಟು ಧನಸಹಾಯ ದೊರೆತಿದೆ. ಹೊಸ ವಿಶ್ವ ವಿದ್ಯಾನಿಲಯ ನಿರ್ಮಾಣ ಕಾರ್ಯಗಳು ತ್ವರಿತ ಗತಿಯಲ್ಲಿ ನಡೆ ದಿವೆ. ಕಾರಣ ಅದರ ಗ್ರಂಥಾಲಯವೂ ಸಹ ಯೋಗ್ಯ ಸಿಬ್ಬಂ ದಿಯೊಂಡಿಗೆ ಮೂಡಿ ಬರಹತ್ತಿದೆ.

ಈ) ರಾಜ್ಯದಲ್ಲಿ 'ಕೃಷಿ ವಿಶ್ವವಿದ್ಯಾಲಯ'ವು ಬೃಹ ದಾಕಾರವಾಗಿ ಬೆಳೆಯಹತ್ತಿದೆ. ಅದರ ಗ್ರಂಥಾಲಯವು ಸಹ

ಹೆಮ್ಮರವಾಗಿ ಬೆಳೆದು ಫಲಗಳನ್ನೀಯುವ ಸಮಯ ದೂರ ವಿಲ್ಲ.

ಉ) ಧಾರವಾಡ ಜಿಲ್ಲೆಯ ಹನುಮನಮಟ್ಟಿಯಲ್ಲಿ 'ಗ್ರಾಮೀಣ ವಿದ್ಯಾಲಯ ( Rural Institute ) ಸ್ಥಾಪಿತ ವಾಗಿದೆ. ಅದರ ಗ್ರಂಥಾಲಯವು ಆಕರ್ಷಕ ರೀತಿಯಲ್ಲಿ ಬೆಳೆಯುತ್ತಿದೆ. ವಿದ್ಯಾರ್ಥಿಗಳಲ್ಲದೆ ಸುತ್ತುಮುತ್ತಲಿನ ವಿದ್ಯಾವಂತ ಹಳ್ಳಿಗರೂ ಈ ಗ್ರಂಥಾಲಯವು ಉಪಯೋಗವಾಗುತ್ತದೆ.

ಊ) ವಿಶ್ವವಿದ್ಯಾಲಯ ಪ್ರಚಾರೋಪನ್ಯಾಸ

**ಮಾಲೆಗಳು :**

ಮೈಸೂರು ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳ ಆಶ್ರಯದಲ್ಲಿ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಜ್ಞಾನದ ಸೂಕ್ಷ್ಮಾಂಶಗಳನ್ನು ಕುರಿತು ವಿದ್ವಜ್ಜನರ ಭಾಷಣಗಳನ್ನೇರ್ಪಡಿಸಿ ಜನಸಾಮಾನ್ಯರಲ್ಲಿ ಜ್ಞಾನಪ್ರಸಾರ ಮಾಡಲಾಗುತ್ತಿದೆ. ವಿದ್ವತ್ಪೂರ್ಣ ಉಪನ್ಯಾಸಗಳನ್ನು ಪುಟ್ಟ ಗ್ರಂಥರೂಪದಲ್ಲಿ ಮುದ್ರಿಸಿ ಅಲ್ಪ ಬೆಲೆಯಲ್ಲಿ ಜ್ಞಾನ ಪಿಪಾಸುಗಳಿಗೆ ಒದಗಿಸಲಾಗುತ್ತಿದೆ. ಹಳ್ಳಿಯ ಜನರ ಮಧ್ಯದಲ್ಲಿ ಈ ಜ್ಞಾನದಾಸೋಹವನ್ನು ಮೈಸೂರು ವಿಶ್ವವಿದ್ಯಾನಿಲಯವು ೧೯೩೭ರಿಂದಲೂ, ಕರ್ನಾಟಕ ವಿಶ್ವವಿದ್ಯಾಲಯವು ೧೯೫೨ರಿಂದಲೂ ಪ್ರಾರಂಭಿಸಿವೆ.

ಈ ಯೋಜನೆಯ ಅಂಗವಾಗಿ ಕರ್ನಾಟಕ ವಿಶ್ವವಿದ್ಯಾಲಯದ "ಸಂಚಾರಿ ಗ್ರಂಥಾಲಯವು" ಹಳ್ಳಿಹಳ್ಳಿಗೆ ಹೋಗಿ ಗ್ರಂಥಗಳನ್ನು ಓದಲು ಜನತೆಗೆ ಹಂಚುವ ಕಾರ್ಯದಲ್ಲಿ ೧೯೫೮ರಿಂದ

ನಿರತವಾಗಿದೆ. ಇದು ೨೦ ಹಳ್ಳಿಗಳ ಒಂದು ಮಂಡಲವನ್ನಾಯ್ದುಕೊಂಡು ಒಂದೊಂದರಲ್ಲಿ ೬೦ ವಿಧದ ಪುಸ್ತಕಗಳುಳ್ಳ ೨೦ ಬೇರೆ ಬೇರೆ ಪೆಟ್ಟಿಗೆಗಳನ್ನು ಹಳ್ಳಿಗೊಂದರಂತೆ ಮೊದಲು ಹಂಚುತ್ತದೆ. ಒಂದು ತಿಂಗಳ ಅವಧಿಯ ನಂತರ ಕ್ರಮವಾಗಿ ಈ ಗ್ರಂಥ ಪೆಟ್ಟಿಗೆಗಳು ಅವೇ ಹಳ್ಳಿಗಳಲ್ಲಿ ಬದಲಾಗುತ್ತವೆ. ಪ್ರತಿಯೊಂದು ಹಳ್ಳಿಗೆ ೨೦ ಪೆಟ್ಟಿಗೆಗಳೂ ಒಮ್ಮೆ ತಲುಪಬೇಕಾದರೆ ೨೦ ತಿಂಗಳ ಅವಧಿ ಹಿಡಿಯುತ್ತದೆ. ಆದರೆ ೨೦ ಹಳ್ಳಿಗಳ ಒಂದು ಮಂಡಲದಲ್ಲಿ ಈ ‘ಸಂಚಾರಿ ಗ್ರಂಥಾಲಯ’ವು ಒಂದು ವರುಷ ಎಂಟು ತಿಂಗಳ ವರೆಗೆ ಸಂಚರಿಸುತ್ತದೆ. ಮೈಸೂರು ರಾಜ್ಯದಲ್ಲಿ ಇದು ಪ್ರಥಮ ಹಾಗೂ ನವೀನ ಪ್ರಯೋಗವಾಗಿದ್ದು ಜನಾದರಣೀಯವಾಗಿದೆ. ಪ್ರಾಚೀನ ಕಾಲದಲ್ಲಿ ಜ್ಞಾನಾರ್ಜನೆಗಾಗಿ ಊರೂರು ಅಲೆಯಬೇಕಾಗಿತ್ತು. ಆದರೆ ಇಂದು ಚಲಿಸುವ ಗ್ರಂಥಾಲಯ ಪ್ರಯೋಗದಿಂದ ಜ್ಞಾನವಾಹಿನಿಯು ತಾನಾಗಿಯೇ ನಾವಿರುವ ಮನೆತನಕ ಹರಿದು ಬರುತ್ತದೆ. ನಾವಿಂದು ನಿಜವಾಗಿಯೂ ಸುದೈವಿಗಳು.

## II ಕಾಲೇಜು ಗ್ರಂಥಾಲಯಗಳು

### ಅ) ಮುಖ್ಯ ಗ್ರಂಥಾಲಯಗಳು:

ಮೈಸೂರು ಮತ್ತು ಕರ್ನಾಟಕ ವಿಶ್ವವಿದ್ಯಾಲಯಗಳ ಆಡಳಿತದಲ್ಲಿ ಒಟ್ಟು ೧೧೨ ಕಾಲೇಜುಗಳಿವೆ. ಮೈಸೂರು ವಿಶ್ವವಿದ್ಯಾಲಯದ ಆಧೀನದಲ್ಲಿ ೩೨ ಸರಕಾರಿ ಕಾಲೇಜುಗಳೂ, ೩೨ ಸರಕಾರೇತರ ಕಾಲೇಜುಗಳೂ ಇವೆ. ಕರ್ನಾಟಕ ವಿಶ್ವ

ವಿದ್ಯಾಲಯದ ಕಕ್ಷೆಯಲ್ಲಿ ೨ ಸರಕಾರಿ ಕಾಲೇಜು, ೬೬ ಸಂಸ್ಥೆಯ ಕಾಲೇಜುಗಳು, ೪ ವಿಶ್ವವಿದ್ಯಾಲಯಕ್ಕೆ ನೇರವಾಗಿ ಸಂಬಂಧಿಸಿದ ಕಾಲೇಜುಗಳು ಇವೆ. ಎರಡು ವಿಶ್ವವಿದ್ಯಾಲಯಗಳಲ್ಲಿ ಒಟ್ಟು ೬,೨೫೦೮ ವಿದ್ಯಾರ್ಥಿಗಳು ( ಕ. ವಿ. ವಿ. ೨೨,೧೬೭ ಮೈ. ವಿ. ವಿ. ೪೦,೩೪೧) ಓದುತ್ತಿದ್ದಾರೆ. ಈ ಎಲ್ಲ ಕಾಲೇಜುಗಳಲ್ಲಿ ಒಂದಿಲ್ಲೊಂದು ಸ್ಥಿತಿಯಲ್ಲಿ ಗ್ರಂಥಾಲಯಗಳು ಅಸ್ತಿತ್ವದಲ್ಲಿವೆ. ಕರ್ನಾಟಕ ವಿಶ್ವವಿದ್ಯಾಲಯವು ತನ್ನಾಧೀನದಲ್ಲಿರುವ ೭೨ ಕಾಲೇಜುಗಳ ಭಂಡಾರಗಳಿಗೆ ಗ್ರಂಥಾಲಯ ಶಾಸ್ತ್ರದಲ್ಲಿ ತರಬೇತಿ ಪಡೆದ ಭಂಡಾರಿಗಳನ್ನು ನಿಯಮಿಸಬೇಕೆಂಬ ನಿಯಮವನ್ನು ೧೯೬೨ರಲ್ಲಿಯೇ ಜಾರಿಯಲ್ಲಿ ತಂದಿದೆ. ಇದರಿಂದಾಗಿ ನಿದ್ರಾವಸ್ಥೆಯಲ್ಲಿದ್ದ ಕೆಲವು ಕಾಲೇಜು ಗ್ರಂಥಾಲಯಗಳು ಎಚ್ಚತ್ತು ಕಾರ್ಯೋನ್ಮುಖವಾಗಿವೆ. ಕೆಲವು ಗ್ರಂಥಾಲಯಗಳಂತೂ ಅನೇಕ ವರುಷಗಳಿಂದ ವಿದ್ಯಾರ್ಥಿ ಮತ್ತು ಶಿಕ್ಷಕರ ಆದರಕ್ಕೆ ಪಾತ್ರವಾಗಿವೆ.

ಅ) ಪಠ್ಯ ಗ್ರಂಥಾಲಯಗಳು :

ಕಾಲೇಜಿನ ಪ್ರತಿಭಾವಂತ ಬಡ ವಿದ್ಯಾರ್ಥಿಗಳಿಗೆ ಒಂದು ವರುಷದ ವರೆಗೆ ಬೇಕಾಗುವ ಪಠ್ಯಪುಸ್ತಕಗಳನ್ನು ಪುಕ್ಕಟೆಯಾಗಿ ಒದಗಿಸುವ ವ್ಯವಸ್ಥೆಯನ್ನು ಕೆಲವು ಕಾಲೇಜುಗಳಲ್ಲಿ ಮಾಡಲಾಗಿದೆ. ಕರ್ನಾಟಕ ಕಾಲೇಜಿನ ಪಠ್ಯ ಗ್ರಂಥಾಲಯದಲ್ಲಿ (Poor Boys Aid Fund Library) ೪೨೦ ಪುಸ್ತಕಗಳ ಒಟ್ಟು ಪ್ರತಿಗಳು ೫೯೮೭ ಇವೆ. ಈ ವರುಷ (೧೯೬೮-೬೯) ೪೫೦

ವಿದ್ಯಾರ್ಥಿಗಳಿಗೆ ( ೨೫೦ ಸಾಯನ್ಸ ೨೦೦ ಆರ್ಟ್ಸ ) ಇದರಿಂದ ಗ್ರಂಥಗಳನ್ನು ಎರವಲಾಗಿ ಕೊಟ್ಟಿದೆ.

(A) ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ೫೦೦ ವಿದ್ಯಾರ್ಥಿಗಳಿಗಿಂತ ಹೆಚ್ಚಿರುವ ಕಾಲೇಜು ಗ್ರಂಥಾಲಯ ಗಳಿಗೆ ಈ ವರುಷ (೧೯೬೮-೬೯) ೫೦೦೦ ರೂಪಾಯಿ ಕೊಡ ಮಾಡಿದ್ದಾರೆ. ಹೀಗೆ ಕೊಂಡ ಪುಸ್ತಕಗಳನ್ನು ಒಂದು ವರ್ಷಾ ವಧಿಯ ವರೆಗೆ ಯೋಗ್ಯ ಬಡ ವಿದ್ಯಾರ್ಥಿಗಳಿಗೆ ಕೊಡಬೇಕೆಂದು ನಿಯಮ ಮಾಡಿದ್ದಾರೆ. ರಾಜ್ಯದ ಎಲ್ಲ ಕಾಲೇಜುಗಳು ಈ ಹಣವನ್ನು ಪಡೆದು ಪಠ್ಯ ಗ್ರಂಥಗಳನ್ನು ಕೊಳ್ಳಲು ವ್ಯಯಿಸಿವೆ. ಈ ಗ್ರಂಥಗಳ ವ್ಯವಸ್ಥೆಗೆ ಕಾಲೇಜುಗಳಲ್ಲಿ ಪ್ರತ್ಯೇಕ ಉಪ ಗ್ರಂಥಾಲಯಗಳು ನಿರ್ಮಾಣಗೊಂಡಿವೆ.

## (ಇ) ಬ್ರಿಟಿಶ್ ಕೌನ್ಸಿಲ್ ಸಂಚಾರಿ ಪಠ್ಯಗ್ರಂಥಾಲಯ:

ಇದರ ಕೇಂದ್ರ ಗ್ರಂಥಾಲಯವು ದಿಲ್ಲಿಯಲ್ಲಿದೆ. ಮುಂ ಬಯಿ, ಮದ್ರಾಸ್, ಕಲಕತ್ತ ಮುಂತಾದ ಮುಖ್ಯ ಪಟ್ಟಣಗಳಲ್ಲಿ ಇದರ ಶಾಖಾ ಗ್ರಂಥಾಲಯಳಿವೆ. ಶಾಖಾ ಗ್ರಂಥಾಲಯಗಳಿಂದ ಆ ಆ ಭಾಗದ ಕಾಲೇಜು ಗ್ರಂಥಾಲಯಗಳಿಗೆ ಬೆಲೆಯುಳ್ಳ ಪಠ್ಯ ಪುಸ್ತಕಗಳನ್ನು ಒಂದು ವರುಷದ ವರೆಗೆ ಒದಗಿಸಲಾಗುವದು. ಈ ಸಂಚಾರೀ ಗ್ರಂಥಾಲಯದ ಸಹಾಯ ಪಡೆಯಬೇಕೆನ್ನುವ ಕಾಲೇಜು ಗ್ರಂಥಾಲಯವು ವರುಷಕ್ಕೆ ಕೇವಲ ೨೦ ರೂಪಾಯಿ ವಂತಿಗೆಯನ್ನು ಕೊಟ್ಟು ಸದಸ್ಯತ್ವ ಪಡೆಯಬಹುದು. ಸದ್ಯದ ಗ್ರಂಥಾಲಯವು ಸುಮಾರು ೨೦,೦೦೦ ರೂ. ಬೆಲೆ ಬಾಳುವ

ಪಠ್ಯ ಗ್ರಂಥಗಳನ್ನು ಒಂದು ವರುಷದವರೆಗೆ ಪಡೆಯಬಹುದು. ಈ ಬಗೆಯ ಅನುಕೂಲತೆಯ ಲಾಭವನ್ನು ರಾಜ್ಯದ ಅನೇಕ ಕಾಲೇಜುಗಳು ಪಡೆದಿವೆ.

### ಈ) ಬುಕ್ ಬ್ಯಾಂಕುಗಳು

ಅನೇಕ ವಿದ್ಯಾರ್ಥಿಗಳಿಗೆ ಓದಲು ಸಾಕಷ್ಟು ಪಠ್ಯಗ್ರಂಥಗಳನ್ನು ಕೊಳ್ಳುವ ಯೋಗ್ಯತೆಯಿಲ್ಲದುದರಿಂದ ಪ್ರಾಧ್ಯಾಪಕರು ಹೇಳುವ ಟಿಪ್ಪಣಿಗಳನ್ನು ( Notes ) ಓದಿ ಪರೀಕ್ಷೆಯಲ್ಲಿ ಪಾಸಾಗುತ್ತಾರೆ. ಹೀಗೆ ಪಾಸಾದ ವಿದ್ಯಾರ್ಥಿಗಳಲ್ಲಿ ಆ ಆ ವಿಷಯದಲ್ಲಿ ಪರಿಜ್ಞಾನ ಅಪೇಕ್ಷಿಸಿದ ಮಟ್ಟದಲ್ಲಿ ಇಲ್ಲದಿರುವುದು ಕಂಡುಬಂದಿದೆ. ಔದ್ಯೋಗಿಕ ಹಾಗೂ ತಾಂತ್ರಿಕ ಪರೀಕ್ಷೆಗಳಲ್ಲಿ ಹೀಗೆ ತೇರ್ಗಡೆಯಾದ ವಿದ್ಯಾರ್ಥಿಗಳಿಂದ ದೇಶಕ್ಕೆ ಹಾನಿಯಾಗುವ ಸಂಭವವುಂಟು. ಇದನ್ನು ಮನದಂದು ಬೆಂಗಳೂರಿನ ರೋಟರಿ ಕ್ಲಬ್ ಮತ್ತು ರಾಮನಾರಾಯಣ ಚೆಲ್ಲಾರಾಮ್ ಆಂಡ್ ಸನ್ಸ್ ಚಾರಿಟೇಬಲ್ ಟ್ರಸ್ಟ್– ಈ ಎರಡು ಸಂಸ್ಥೆಗಳು ಒಂದಾಗಿ ೧೯೫೯ರಲ್ಲಿ " ವಿದ್ಯಾರ್ಥಿಗಳ ಸಹಾಯಕ ಸಂಸ್ಥೆಯನ್ನು " ( Students Aid Societiy ) ಸ್ಥಾಪಿಸಿದವು. ಈ ಸಂಸ್ಥೆಯು ಈ ವರೆಗೆ ಮೈಸೂರು ರಾಜ್ಯದಲ್ಲಿ ೪೫ ಕಾಲೇಜುಗಳಲ್ಲಿ ಬುಕ್ ಬ್ಯಾಂಕುಗಳನ್ನು ತೆರೆದಿದೆ. ೩೧ ತಾಂತ್ರಿಕ ಮತ್ತು ಔದ್ಯೋಗಿಕ ಕಾಲೇಜುಗಳು, ೭ ವೈಜ್ಞಾನಿಕ ಕಾಲೇಜುಗಳು– ಸಮಾವೇಶವಾಗಿವೆ. ಈ ಬುಕ್ ಬ್ಯಾಂಕುಗಳಿಗೆ ೧೯೬೩ ರಲ್ಲಿ ೯೦೩೮ ಪಠ್ಯಪುಸ್ತಕಗಳನ್ನು ನೇರವಾಗಿ ಹಂಚಲಾಗಿದೆ.

೧,೬೫,೧೨೮ ರೂಪಾಯಿಗಳನ್ನು ಹೊಸ ಪುಸ್ತಕ ಮತ್ತು ಕಪಾಟು ಗಳನ್ನು ಕೊಳ್ಳಲು ನೆರವು ನೀಡಲಾಗಿದೆ. ರಾಜ್ಯ ಸರಕಾರ ದಿಂದ ಈ ಸಂಸ್ಥೆಗೆ ಸಾಕಷ್ಟು ಪ್ರೋತ್ಸಾಹ ಸಿಕ್ಕಿದೆ.

## III ವಯಸ್ಕರ ಶಿಕ್ಷಣ ಸಮಿತಿ ಗ್ರಂಥಾಲಯಗಳು :

### (ಅ) ಮೈಸೂರು ವಯಸ್ಕರ ಶಿಕ್ಷಣ ಸಮಿತಿ ಗ್ರಂಥಾಲಯ

ಮೈಸೂರು ನಗರದಲ್ಲಿ ' ಮೈಸೂರು ವಯಸ್ಕರ ಶಿಕ್ಷಣ ಸಮಿತಿ ' ಯೊಂದು ೧೯೪೧ರಲ್ಲಿ ಉದಯವಾಯಿತು. ಹಳೆಯ ಮೈಸೂರು ಸಂಸ್ಥಾನದಲ್ಲಿ ಅಕ್ಷರ ಪ್ರಚಾರ ಚಳುವಳಿಯನ್ನು ಕೈಕೊಳ್ಳುವುದೇ ಅದರ ಪ್ರಾಮುಖ್ಯ ಗುರಿ. ನಿರಕ್ಷರಿಗಳಾದ ಪ್ರೌಢರಿಗೆ ಶಿಕ್ಷಣ ಕೊಡುವುದೇ ಅದರ ಮುಖ್ಯ ಕಾರ್ಯ.

' ಪ್ರೌಢರಿಗೆ ಕೇವಲ ಓದು ಬರಹ ಕಲಿಸಿದರೆ ಕಾರ್ಯ ಪೂರ್ಣವಾದಂತಾಗಲಿಲ್ಲ. ಅವರಿಗೆ ತಮ್ಮ ಓದನ್ನು ನಿರಂತರ ಅಭಿವೃದ್ಧಿ ಪಡಿಸಿಕೊಳ್ಳಲು ಅವರ ಅಂತಸ್ತು ಅಭಿರುಚಿಗಳಿಗೆ ತಕ್ಕಂತೆ ಸಾಹಿತ್ಯ ನಿರ್ಮಿಸಿ ಉಚಿತವಾಗಿ ಒದಗಿಸಿ ಕೊಡಬೇಕು. ಅವರ ಅರಿವನ್ನು ವಿಕಸನಗೊಳಿಸುವದಕ್ಕಾಗಿ ಯೋಗ್ಯ ಅವ ಕಾಶವನ್ನು ಕಲ್ಪಿಸಿ ಕೊಡಬೇಕು—ಎಂದು ಸಮಿತಿಯು ಆಲೋ ಚಿಸಿತು. ಆಲೋಚನೆಯನ್ನು ಆಚಾರದಲ್ಲಿಳಿಸಲು ಇಂದು ಸಮಿ ತಿಯು ತನ್ನ ಅಧಿಕಾರ ಆಡಳಿತೆಯಲ್ಲಿ ೨೫೭೨ ಗ್ರಂಥಭಂಡಾರ ಗಳನ್ನು ಸ್ಥಾಪಿಸಿ ಪ್ರೌಢ ಶಿಕ್ಷಣ ಪ್ರಸಾರ ಮಾಡಹತ್ತಿದೆ ". ಪ್ರಮುಖ ನಗರಗಳಲ್ಲಿ ೧೭ ಕೇಂದ್ರ ಗ್ರಂಥಾಲಯಗಳನ್ನು ತೆರೆ ದಿದೆ. ಕೇಂದ್ರ ಗ್ರಂಥ ಭಂಡಾರದಿಂದ ಅದರ ಸುತ್ತುಮುತ್ತ

ಲಿನ ಹಳ್ಳಿಯ ಭಂಡಾರಗಳಿಗೆ ಗ್ರಂಥಗಳನ್ನು ಪೂರೈಸಲಾಗುತ್ತದೆ. ಸಮಿತಿಯು ಪ್ರತಿ ವರುಷ ಅನೇಕ ಗ್ರಂಥಗಳನ್ನು ಪ್ರೌಢರಿಗಾಗಿ ಪ್ರಕಟಿಸುತ್ತದೆ. ಪ್ರಕಟಿಸಿದ ಒಟ್ಟು ೫೦,೦೦೦ ಪ್ರತಿಗಳನ್ನು ಗ್ರಾಮಾಂತರ ಭಂಡಾರಗಳಿಗೆ ಹಂಚುತ್ತಿದೆ.

ಹೊಸ ಗ್ರಂಥಾಲಯದ ಸ್ಥಾಪನೆಗಾಗಿ ಗ್ರಾಮ ಪಂಚಾಯಿತಿ ಸಭೆಯವರು ಉಚಿತವಾಗಿ ಒಂದು ಓದು ಮನೆಯನ್ನು ಒದಗಿಸಿ ಕೊಡಬೇಕಲ್ಲದೆ ವರುಷಕ್ಕೆ ೩೦ ರೂ. ವೆಚ್ಚ ಮಾಡಲು ಒಪ್ಪಬೇಕು. ಅನಂತರ ವಯಸ್ಕರ ಶಿಕ್ಷಣ ಸಮಿತಿಯವರು ವರುಷಕ್ಕೆ ೨೦ ರೂಪಾಯಿಗಳ ಧನಸಹಾಯ ಮಾಡಿ ಗ್ರಂಥಾಲಯವನ್ನು ಸ್ಥಾಪಿಸುವರು.

ಸಮಿತಿಯು ಪ್ರಾರಂಭದ ಕೆಲವು ವರುಷಗಳವರೆಗೆ 'ಬೆಳಕು' ಎಂಬ ಮಾಸಪತ್ರಿಕೆಯನ್ನು ಹೊರಡಿಸಿತು. ೧೯೪೪ರ ರಿಂದ 'ಪುಸ್ತಕ ಪ್ರಪಂಚ' ಎಂಬ ಮಾಸಿಕವನ್ನು ಪ್ರಕಟಿಸಲು ಪ್ರಾರಂಭಿಸಿದ್ದು ಇಂದಿಗೂ ಜನಪ್ರಿಯವಾಗಿ ಅದು ಉಳಿದುಬಂದಿದೆ.

## ಆ) ಬೆಳಗಾವಿ ಪ್ರಾದೇಶಿಕ ಶಿಕ್ಷಣ ಸಮಿತಿ ಗ್ರಂಥಾಲಯಗಳು :

ಈ ಸಮಿತಿಯ ಉದ್ದೇಶವು ಸಹ ನಿರಕ್ಷರ ಕುಕ್ಷಿಗಳಾದ ಪ್ರೌಢರಿಗೆ ಅಕ್ಷರಾಭ್ಯಾಸ ಮಾಡಿಸುವದಾಗಿದೆ. ಇದರ ಕಾರ್ಯಕ್ಷೇತ್ರ ಮುಂಬಯಿ ಕರ್ನಾಟಕದ ಬೆಳಗಾವಿ, ವಿಜಾಪುರ, ಧಾರವಾಡ ಮತ್ತು ಕಾರವಾರ ಈ ನಾಲ್ಕು ಜಿಲ್ಲೆಗಳಿಗೆ ಸೀಮಿತವಾಗಿದೆ. ಕೇಂದ್ರ ಕಚೇರಿ ಬೆಳಗಾವಿಯಲ್ಲಿದೆ. ೧೯೫೦ರಲ್ಲಿ ನಾಲ್ಕು ಜಿಲ್ಲಾ ಸಮಿತಿಗಳು ಅಸ್ತಿತ್ವದಲ್ಲಿ ಬಂದವು. ಪ್ರೌಢರಿಗಾಗಿ ಗ್ರಂಥ

ಭಂಡಾರಗಳನ್ನು ತೆರೆಯುವದು ಮೊದಮೊದಲು ಸಮಿತಿಯ ಉದ್ದೇಶವಾಗಿರಲಿಲ್ಲ. ಆದರೆ ಆಕರ್ಷಕವಾದ ಸುಲಭ ಬೆಲೆಯ ಗ್ರಂಥಗಳನ್ನು ಪ್ರಕಟಿಸಿ ಪ್ರೌಢರಿಗೆ ಹಂಚುತ್ತಿತ್ತು.

೧೯೫೭ರಲ್ಲಿ ಸಮಿತಿಯ ಪುನರ್ರಚನೆಯಾಯಿತು. ಹೊಸ ಯೋಜನೆಯಂತೆ ಈ ಮುಂಚೆ ಅಸ್ತಿತ್ವದಲ್ಲಿರುವ ವಾಚನಾಲಯ ಗಳಿಗೆ ವರುಷಕ್ಕೆ ೩೫ ರೂಪಾಯಿಗಳ ಧನ ಸಹಾಯ ನೀಡು ತ್ತದೆ. ಪತ್ರಿಕೆಗಳಿಗಾಗುವ ಒಟ್ಟು ಖರ್ಚಿನ ಅರ್ಧವನ್ನು ತಾನೇ ವಹಿಸಿಕೊಳ್ಳುತ್ತದೆ. ೧೦೦ ಗ್ರಂಥಭಂಡಾರಗಳಿಗೆ ಇದು ಸಹಾಯ ಸಲ್ಲಿಸುತ್ತದೆ.

## (iv) ಚಲನಚಿತ್ರ ಭಂಡಾರಗಳು : (Film Libraries)

ಒಂದು ಬೆಂಗಳೂರಿನ ವಿದ್ಯಾಧಿಕಾರಿಗಳ ಕಚೇರಿಯಲ್ಲಿ ಇನ್ನೊಂದು ಮಡಕೇರಿಯಲ್ಲಿ– ಹೀಗೆ ರಾಜ್ಯದಲ್ಲಿ ಎರಡು ಚಲನ ಚಿತ್ರ ಭಂಡಾರಗಳಿವೆ. ಇವು ರಾಜ್ಯದ ಶಿಕ್ಷಣ ಖಾತೆಯ ಆಡಳಿತ ದಲ್ಲಿವೆ.

ಮೊದಲನೆಯದರಲ್ಲಿ ೧೧೦೦ ಚಲನಚಿತ್ರ ಪಟಗಳಿವೆ. ಇವುಗಳನ್ನು ಮಾಧ್ಯಮಿಕ ಶಾಲೆಗಳಲ್ಲಿ ಪ್ರದರ್ಶಿಸಲು ಎರವ ಲಾಗಿ ಕೊಡಲಾಗುತ್ತದೆ.

ಎರಡನೆಯದರಲ್ಲಿ ೩೨೮ ಚಲಚಿತ್ರ ಪಟಗಳಿದ್ದ ಸಧ್ಯದ ಶಿಕ್ಷಣ ಸಂಸ್ಥೆಗಳಿಗೆ ಚಲನ ಚಿತ್ರಗಳನ್ನು ಪ್ರದರ್ಶಿಸಲು ಕೊಡ ಲಾಗುತ್ತದೆ. ಇದರ ಆಶ್ರಯದಲ್ಲಿ ಸಂಚಾರಿ ಚಲನಚಿತ್ರ

ಭಂಡಾರದಿಂದ ಗ್ರಾಮ ಭಂಡಾರಗಳಲ್ಲಿ ಚಿತ್ರಪಟ ಪ್ರದರ್ಶನ ವನ್ನು ಏರ್ಪಡಿಸಲಾಗುತ್ತದೆ.

## (v) ಸಂಶೋಧನ ಸಂಸ್ಥೆಗಳ ಗ್ರಂಥಾಲಯಗಳು :

ಒಂದು ದೇಶದ ಸಾಂಪತ್ತಿಕ ಅಭಿವೃದ್ಧಿಯು ಅದರ ಸಾಮಾಜಿಕ, ವೈಜ್ಞಾನಿಕ, ಸಾಂಸ್ಕೃತಿಕ ಪ್ರಗತಿಯು ಮೇಲೆ ಅವ ಲಂಬಿಸಿದೆ. ಜನಜೀವನವು ಸುಧಾರಿಸಿ ಸುಖಮಯವಾಗ ಬೇಕಾದರೆ ಅದಕ್ಕೆ ಸಹಾಯಕವಾಗುವ ಸಂಶೋಧನೆ ಹೆಚ್ಚಬೇಕು. ಸಂಶೋಧನೆಯ ಕಾರ್ಯಕ್ಕೆ ಸುಸಜ್ಜಿತವಾದ ಪ್ರಯೋಗಶಾಲೆ ಮತ್ತು ಸಮರ್ಥ ಗ್ರಂಥಾಲಯ ಇವು ಅತ್ಯವಶ್ಯವಾಗಿರಬೇಕು. ಉತ್ತಮ ಪ್ರಯೋಗಶಾಲೆ ಮತ್ತು ಸ್ವಯಂಪೂರ್ಣ ಗ್ರಂಥಾ ಲಯಗಳಿಂದ ಸುಸಜ್ಜಿತವಾದಸಂಸ್ಥೆಗಳಲ್ಲಿ ಬೆಂಗಳೂರಿನ ವಿಜ್ಞಾನ ಸಂಸ್ಥೆಯು ( Indian Institute of Science) ಆದರ್ಶ ಪ್ರಾಯವಾಗಿದೆ. ಇದರ ಭಂಡಾರದಲ್ಲಿ ಈಗ ವಿಜ್ಞಾನ ವಿಷ ಯಕ್ಕೆ ಸಂಬಂಧಪಟ್ಟ ೩೨,೦೦೦ ಗ್ರಂಥಗಳೂ ೨೮,೦೦೦ ನಿಯತಕಾಲಿಕೆಗಳ ಹಳೆಯ ಸಂಪುಟಗಳೂ ಇವೆ. ಸಂಸ್ಥೆಯು ಪ್ರತಿವರ್ಷ ೫೦,೦೦೦ ರೂ. ಗಳನ್ನು ಗ್ರಂಥ ಪತ್ರಿಕೆಗಳನ್ನು ಕೊಳ್ಳಲು ಖರ್ಚು ಮಾಡುತ್ತದೆ. ಪ್ರತಿವರುಷ ೧೫೦೦ ಮೇಲ್ಪರಗತಿಯ ಪತ್ರಿಕೆಗಳನ್ನು ತರಿಸುತ್ತದೆ. ಮೈಸೂರು ಪ್ರಾಚ್ಯ ಸಂಶೋಧನ ಸಂಸ್ಥೆ, ಧಾರವಾಡ ಕನ್ನಡ ಸಂಶೋಧನ ಸಂಸ್ಥೆ, ವಚನ ವಾಙ್ಮಯ ಸಂಶೋಧನ ಸಂಸ್ಥೆ ಮುಂತಾದವುಗಳ ಗ್ರಂಥ ಹಾಗೂ ತಾಡಓಲೆಗಳ ಭಂಡಾರಗಳು ನಾಡಿನ ಸಾಹಿತ್ಯ,

ಧರ್ಮ, ಇತಿಹಾಸ, ಕಲೆಗಳ ಮೇಲೆ ಸಂಶೋಧನೆ ಮಾಡಬೇಕೆನ್ನುವ ಜಿಜ್ಞಾಸುಗಳಿಗೆ ಕೇಂದ್ರ ಸ್ಥಳಗಳಾಗಿವೆ. ಇಂತಹ ೨೦ ಸಂಶೋಧನ ಗ್ರಂಥಭಂಡಾರಗಳು ಕಳೆದ ೨೫ ವರುಷಗಳಲ್ಲಿ ರಾಜ್ಯದಲ್ಲಿ ಜನ್ಮತಾಳಿವೆ. ಇವುಗಳನ್ನು ಒಂದು ಅರ್ಥದಲ್ಲಿ ಶಿಕ್ಷಣ ಸಂಸ್ಥೆಗಳ ಗ್ರಂಥಭಂಡಾರವೆಂದು ಗಣಿಸಬಹುದು.

## ೭. ಗ್ರಂಥಾಲಯ ವಿಜ್ಞಾನ ತರಬೇತಿ

**ತರಬೇತಿಯ ಅವಶ್ಯಕತೆ :**

ಮಾನವನು ತನ್ನ ಅಭ್ಯಾಸ, ಅನುಭವಗಳಿಂದ ಕಂಡುಂಡ ಸತ್ಯ ಸದುಪಯೋಗಿ ಸಂಗತಿಗಳನ್ನು ಸಂಗ್ರಹಿಸಿ ಮುಂಬರುವ ಸಂಗತಿಯ ಸುಖ ಸೌಲಭ್ಯಗಳಿಗಾಗಿ ಬಿಟ್ಟು ಹೋಗುವ ಅತ್ಯಮೂಲ್ಯ ಸಂಪತ್ತೆಂದರೆ ಗ್ರಂಥಗಳೇ. ಈ ಅಪಾರ ಸಂಪತ್ತಿನ ಆಗರವೇ ಗ್ರಂಥಾಲಯ ಷಡ್ರಸವೇಕೆ ಸಹಸ್ರ ರಸಭರಿತವಾದ ಅಗಣಿತ ಗ್ರಂಥಗಳನ್ನಿಟ್ಟ ಗ್ರಂಥಾಲಯದಲ್ಲಿ ಪ್ರವೇಶಿಸಿದ ವಾಚಕನಿಗೆ ತನ್ನ ಅಭಿರುಚಿಗೆ ತಕ್ಕುದಾಗಿ ಗ್ರಂಥ ವನ್ನು ತಕ್ಷಣ ದೊರಕಿಸಿಕೊಳ್ಳುವದು ಬಹು ಕಷ್ಟಕರ. ಓದುಗರ ವಯೋಮಾನ ಅನುಭವದ ಆಳ-ನೀಳ ಬುದ್ಧಿಯ ವಿಸ್ತಾರ ಅಭಿರುಚಿಯ ಅಂತರಂಗ ಇತ್ಯಾದಿಗಳನ್ನರಿತು ಓದಬೇಕೆನಿಸಿದ ಗ್ರಂಥಗಳನ್ನು ಆ ಕ್ಷಣದಲ್ಲಿ ಆಯ್ಕೆಮಾಡಿ ಓದುಗರಿಗೆ ದೊರಕಿಸಿ ಕೊಡುವ ಗುರುತರವಾದ ಹೊಣೆ ಗ್ರಂಥಭಂಡಾರಿಯದಾಗಿದೆ.

ಗ್ರಂಥಭಂಡಾರಿ ಈ ಮಹತ್ವದ ಹೊಣೆಗಾರಿಕೆ ಕೇವಲ ಹುಟ್ಟಿನೊಂದಿಗೆ ಬೆಳೆದು ಬರುವ ವಸ್ತುವಲ್ಲ. ಆದರೆ ಸತತಾ ಭ್ಯಾಸ ಪ್ರಾಯೋಗಿಕ ತರಬೇತಿಗಳಿಂದ ಅರಿತುಕೊಳ್ಳುವ ಅನು ಭವವಾಗಿದೆ.

## ಕರ್ನಾಟಕದಲ್ಲಿ :

ಗ್ರಂಥಾಲಯಗಳು ನಮ್ಮ ನಾಡಿನ ಸಾಕಷ್ಟು ಸಂಖ್ಯೆಯಲ್ಲಿ ಬೆಳೆಯುತ್ತಲೂ, ಬಹುಮುಖ ಸೇವೆಯನ್ನು ಮಾಡುತ್ತಲೂ ಬಂದಿವೆ. ಆದರೂ ಈ ಬೆಳೆ ಹಾಗೂ ಸೇವೆಗಳು ೧೯೬೧ರ ಪೂರ್ವದಲ್ಲಿ ನೆನೆಸಿದಷ್ಟು ತೃಪ್ತಿಕರವಾಗಿರಲಿಲ್ಲವೆಂದು ಹೇಳಬೇಕಾಗಿದೆ, ಸಾರ್ವಜನಿಕ ಗ್ರಂಥಾಲಯ ಕಾನೂನು ಜಾರಿಯಲ್ಲಿ (೧೯೬೬) ಬಂದಿರುವ ಇಂದಿನ ದಿನಗಳಲ್ಲಿ ಯೋಗ್ಯ ತರಬೇತಿಯ ಅವಶ್ಯಕತೆ ಎಂದಿಗಿಂತ ಹೆಚ್ಚಾಗಿದೆ. ಆ ದಿಶೆಯಲ್ಲಿ ಆಶಾದಾಯಕ ಪ್ರಯತ್ನಗಳು ನಡೆದಿವೆ.

ಗ್ರಂಥಾಲಯ ಶಾಸ್ತ್ರದಲ್ಲಿ ಅಲ್ಪಾವಧಿಯ ತರಬೇತಿ ಕೊಡುವ ಮೊದಲಪ್ರಯತ್ನ ಧಾರವಾಡದಲ್ಲಿ ನಡೆಯಿತು. ಕರ್ನಾಟಕ (ಮುಂಬೈ) ಗ್ರಂಥಾಲಯ ಸಂಘವು ೧೯೪೨–೪೩ರಲ್ಲಿ ೧೧ ಜನ ವಿದ್ಯಾರ್ಥಿಗಳಿಗೆ ಗ್ರಂಥಾಲಯ ಶಾಸ್ತ್ರದಲ್ಲಿ ಶಿಕ್ಷಣವನ್ನಿತ್ತಿತು. ಈ ಕಾರ್ಯ ಕೆಲವು ಅನಿವಾರ್ಯ ಕಾರಣಗಳ ಮೂಲಕ ಅನಂತರ ನಿಲ್ಲಿಸಲ್ಪಟ್ಟಿತು.

ಗ್ರಂಥಾಲಯ ತರಬೇತಿಯ ವಿಷಯದಲ್ಲಿ ನಮ್ಮ ನಾಡು ಇನ್ನಿತರ ರಾಜ್ಯಗಳಿಗಿಂತ ಎಷ್ಟೋ ಪಾಲು ಮೇಲೆಂದು ಹೇಳಬಹುದು. ಇಲ್ಲಿ ಇಂದು ಐದು ಸಂಸ್ಥೆಗಳು ತರಬೇತಿಯನ್ನು ಕೊಡುತ್ತವೆ.

**(೧) ಮೈಸೂರು ಸರಕಾರಿ ಗ್ರಂಥಾಲಯ ಶಾಸ್ತ್ರದ ತರಬೇತಿ ವಿದ್ಯಾಲಯ, ಬೆಂಗಳೂರು :**

೧೯೬೧ರಲ್ಲಿ ಪ್ರಾರಂಭವಾಗಿದೆ. ಇದು ಮೈಸೂರು ಸರಕಾರದ ಶಿಕ್ಷಣ ಖಾತೆಯ ಡಾಯರೆಕ್ಟರರು ಅದರ ಮುಖ್ಯಾಧಿಕಾರಿಗಳು. ಕೇವಲ ವಿದ್ಯಾಲಯದ ಆಗುಹೋಗುಗಳನ್ನು ನೋಡಿಕೊಂಡು ಹೋಗಲು ಡಾಯರೆಕ್ಟರರ ಕೆಳಗೊಬ್ಬರು ರಜಿಸ್ಟ್ರಾರರಿದ್ದರು. ಈಗ ರಾಜ್ಯ ಗ್ರಂಥಭಂಡಾರಿಗಳೇ ರಾಜ್ಯದ ಸಾರ್ವಜನಿಕ ಗ್ರಂಥಾಲಯಗಳ ಕ್ಯುರೇಟರರೂ ಆಗಿದ್ದಾರೆ. ಅವರ ಸಹಾಯಕ್ಕೆ ಗ್ರಂಥಾಲಯ ಶಾಸ್ತ್ರದಲ್ಲಿ ತರಬೇತಿ ಪಡೆದ ಇಬ್ಬರು ಪ್ರಾಧ್ಯಾಪಕರಿದ್ದಾರೆ.

**(೨) ಮಹಿಳಾ ಗ್ರಂಥಾಲಯ ವಿಜ್ಞಾನ ತರಬೇತಿ ಕೇಂದ್ರ, ವಿಮೆನ್ಸ ಪೊಲಿಟೆಕ್ನಿಕ್, ಶೇಷಾದ್ರಿ ರಸ್ತೆ, ಬೆಂಗಳೂರು :**

೧೯೬೧ರಲ್ಲಿ ಪ್ರಾರಂಭವಾಗಿದೆ. ಬೆಂಗಳೂರಿನ ಹೆಣ್ಣುಮಕ್ಕಳ ಪೊಲಿಟೆಕ್ನಿಕ್‌ದಲ್ಲಿಯೇ ಕೇಂದ್ರವಿದೆ. ಅದರ ಆಡಳಿತ ಸರಕಾರದ ಅಧೀನ. ಪೊಲಿಟೆಕ್ನಿಕ್‌ದ ಮುಖ್ಯಾಧ್ಯಾಪಕಿ (ಕ) ಯರೆ ಇದರ ವ್ಯವಸ್ಥಾಪಕರು. ಇದು ಕೇವಲ ಮಹಿಳೆಯರಿಗಾಗಿ ಮೀಸಲಾಗಿದೆ.

**(೩) ಗ್ರಂಥ ಸಂಶೋಧನೆ ಮತ್ತು ತರಬೇತಿ ಕೇಂದ್ರ, ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆ, ಮಲ್ಲೇಶ್ವರಮ್, ಬೆಂಗಳೂರು :**

೧೯೬೧ರಲ್ಲಿ ಸುರುವಾಗಿದೆ. ಕಲಕತ್ತೆಯಲ್ಲಿರುವ ಭಾರತೀಯ ಸಂಖ್ಯಾಶಾಸ್ತ್ರ ಸಂಸ್ಥೆಯ ಅಂಗಸಂಸ್ಥೆಯಿದು. ಅಂಗ

ಸಂಸ್ಥೆಯ ಆಶ್ರಯದಲ್ಲಿದ್ದ ಗ್ರಂಥ ಸಂಶೋಧನೆ ಮತ್ತು ತರಬೇತಿ ಕೇಂದ್ರ ನಡೆಯುವದು. ಪ್ರಾಧ್ಯಾಪಕರ ಇತರ ನೌಕರರ ನೇಮಕ, ಆಡಳಿತ ಇತ್ಯಾದಿ ಕಲಕತ್ತೆಯ ಮುಖ್ಯ ಸಂಸ್ಥೆಯ ಡಾಯರೆಕ್ಟರರಿಗೆ ಸೇರಿದೆ. ಮುಖ್ಯ ಸಂಸ್ಥೆಯು ಕೇಂದ್ರ ಸರಕಾರದ ಆಧೀನದಲ್ಲಿದೆ.

ಗ್ರಂಥಾಲಯ ವಿಜ್ಞಾನದಲ್ಲಿ ಉಚ್ಚ ಶಿಕ್ಷಣವನ್ನು ಕೊಡುವ ದಕ್ಷಿಣ ಭಾರತದಲ್ಲಿಯ ಏಕಮೇವ ಕೇಂದ್ರವಿದು. ಭಾರತೀಯ ಖ್ಯಾತಿವೆತ್ತ ಗ್ರಂಥಾಲಯ ವಿಜ್ಞಾನಿಗಳಾದ ಪದ್ಮಶ್ರೀ ಡಾ. ಎಸ್.ಆರ್. ರಂಗನಾಥನ್ ಅವರು ಇದರ ಪ್ರಧಾನ ಗೌರವ ಪ್ರಾಧ್ಯಾಪಕರಾಗಿದ್ದಾರೆ. ಅವರ ಕೆಳಗೆ ಮೂವರು ಪ್ರಾಧ್ಯಾಪಕರಿದ್ದಾರೆ.

**(೪) ಗ್ರಂಥಾಲಯ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವ ವಿದ್ಯಾಲಯ, ಧಾರವಾಡ :**

ಇದು ಪ್ರಾರಂಭವಾದುದು ೧೯೬೨ರಲ್ಲಿ. ವ್ಹಾಯಿಸ್ ಚಾನ್ಸಲರ ಮತ್ತು ಸಿಂಡಿಕೇಟ ಸದಸ್ಯರು ಇವರ ನಿರ್ಣಯ ಹಾಗೂ ಆದೇಶದ ಮೇರೆಗೆ ರಜಿಸ್ಟ್ರಾರರು ವಿಶ್ವವಿದ್ಯಾಲಯದ ಆಡಳಿತ ವನ್ನು ನಡೆಯಿಸಿಕೊಂಡು ಹೋಗುತ್ತಾರೆ. ಗ್ರಂಥಾಲಯ ವಿಜ್ಞಾನ ವಿಭಾಗವು ವಿಶ್ವವಿದ್ಯಾಲಯ ಗ್ರಂಥಾಲಯಕ್ಕೆ ಜೋಡಿ ಸಲ್ಪಟ್ಟಿದೆ. ಗ್ರಂಥಾಲಯದ ವಿಭಾಗದ ಮುಖ್ಯ ಪ್ರಾಧ್ಯಾಪ ಕರು ಗ್ರಂಥಾಲಯ ಶಾಸ್ತ್ರದಲ್ಲಿ ತರಬೇತಿ ಪಡೆದ ಐವರು ಗೌರವ ಪ್ರಾಧ್ಯಾಪಕರಿದ್ದಾರೆ.

**(೫) ಗ್ರಂಥಾಲಯ ವಿಜ್ಞಾನ ವಿಭಾಗ, ಮೈಸೂರು ವಿಶ್ವ ವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು :**

ಇದು ೧೯೬೫ ಜೂನದಿಂದ ಪ್ರಾರಂಭವಾಗಿದೆ. ವ್ಹಾಯಿಸ ಚಾನ್ಸಲರ ಮತ್ತು ಸಿಂಡಿಕೇಟ ಸಮಿತಿಯ ಮಾರ್ಗದರ್ಶನದಲ್ಲಿ ರಜಿಸ್ಟ್ರಾರರೇ ವಿಶ್ವವಿದ್ಯಾಲಯದ ಆಡಳಿತಗಾರರಾಗಿರುವರು. ವ್ಹಾಯಿಸ್‌ಚಾನ್ಸಲರರು, ಸಿಂಡಿಕೇಟ ಸದಸ್ಯರು, ರಜಿಸ್ಟ್ರಾರ– ಇವರೆಲ್ಲ ರಾಜ್ಯ ಸರಕಾರದಿಂದ ನಿಯಮಿಸಲ್ಪಟ್ಟವರು. ಜನತಾ ಪ್ರತಿನಿಧಿಗಳಂತೆ ಮತದಾರರಿಂದ ಆಯ್ಕೆ ಮಾಡಲ್ಪಟ್ಟವರಲ್ಲ. ಮುಖ್ಯ ಸೂತ್ರಗಳು ಸರಕಾರದ ವಶದಲ್ಲಿವೆ. ಗ್ರಂಥಾಲಯ ವಿಜ್ಞಾನವು ವಿಶ್ವವಿದ್ಯಾಲಯದಲ್ಲಿ ಕಲಿಸುವ ಸ್ನಾತಕೋತ್ತರ ಅಭ್ಯಾಸವಾಗಿದೆ. ಇದು ವಿಶ್ವವಿದ್ಯಾಲಯ ಗ್ರಂಥಾಲಯಕ್ಕೆ ಜೋಡಿಸಲ್ಪಡದೆ ಸ್ವತಂತ್ರವಾದ ಸ್ನಾತಕೋತ್ತರ ವಿಭಾಗ ವಾಗಿದೆ. ಮೂವರು ಪ್ರತ್ಯೇಕ ಪ್ರಾಧ್ಯಾಪಕರನ್ನು ನಿಯಮಿಸ ಲಾಗಿದೆ. ವಿಶ್ವವಿದ್ಯಾಲಯದ ಗ್ರಂಥಭಂಡಾರಿ ಗೌ. ಪ್ರಾಧ್ಯಾಪಕ ರಾಗಿದ್ದಾರೆ.

ಮೇಲೆ ವಿವರಿಸಿದ ಐದು ಸಂಸ್ಥೆಗಳು ತರಬೇತಿ ಕಾರ್ಯ ವನ್ನು ತೃಪ್ತಿಕರವಾಗಿ ಮಾಡುತ್ತಿವೆ. ಅಲ್ಲದೆ ಗ್ರಂಥಭಂಡಾರಿ ಸೇವೆಯ ಮಹತಿಯು ಜನತೆಯ ಕಣ್ಣು ತೆರೆಸಿದೆ. ಗ್ರಂಥಭಂ ಡಾರಿಗಳ ಪಗಾರ ಶ್ರೇಣಿಯೂ ಸಹ ಎತ್ತರಿಸಲ್ಪಟ್ಟಿದೆ. ಶೈಕ್ಷ ಣಿಕ ಗ್ರಂಥಾಲಯಗಳಲ್ಲಿ ಭಂಡಾರಿಗಳ ಸ್ಥಾನಮಾನಗಳು ಅಲ್ಲಿಯ ಪ್ರಾಧ್ಯಾಪಕರ ಸ್ಥಾನಮಾನಗಳಿಗೆ ಸರಿಸಮಾನ ವಾಗಿವೆ. ರಾಜ್ಯ ಸರಕಾರವು ಗ್ರಂಥಾಲಯ ಕಾನೂನನ್ನು ಜಾರಿ

ಯಲ್ಲಿ ತರುವದಲ್ಲದೆ ಪ್ರತ್ಯೇಕ ಖಾತೆಯನ್ನು ತೆರೆದಿದೆ. ಆದರೆ ನೌಕರ ವೇತನ ಪ್ರಮಾಣಗಳು ಆಕರ್ಷಕವಾಗುವ ನಿರೀಕ್ಷೆಯಿದೆ. ಹೀಗಾಗಿ ಮೇಧಾವಿಗಳಾದ ವಿದ್ಯಾರ್ಥಿಗಳು ಗ್ರಂಥಾಲಯದಲ್ಲಿ ತರಬೇತಿಯನ್ನು ಪಡೆಯಲು ಮುಂದಾಗುತ್ತಿರುವರು.

# ೮. ನಾಡಿನ ಏಳ್ಗೆ

ಗ್ರಂಥಾಲಯುಗಳು ಪ್ರಭಾವಶಾಲಿಯಾದ ಮತ್ತು ಪ್ರಯೋಜನಕಾರಿಯಾದ ಜ್ಞಾನಪ್ರಸಾರದ ಸಾಧನಗಳು; ರಾಷ್ಟ್ರೋನ್ನತಿಯು ಸಮಾಜೋದ್ಧಾರದ ಶ್ರೇಷ್ಠ ಸಾಧನಗಳು. ಅವುಗಳ ಸರ್ವಾಂಗಸುಂದರ ಬೆಳವಣಿಗೆಯೇ ನಾಡಿನ ಏಳ್ಗೆ.

ಇಂದಿನ ಮುಂದುವರಿದ ದೇಶಗಳಲ್ಲಿ ಗ್ರಂಥಾಲಯುಗಳು ಹರಡಿ ಹಬ್ಬುವದಕ್ಕೆ ಪ್ರಜಾಪ್ರಭುತ್ವ ಸರಕಾರವೇ ಮುಖ್ಯ ಪ್ರೇರಕಶಕ್ತಿಯಾಗಿ ಸಹಾಯ ಮಾಡಿದೆ. ಪ್ರಜಾ ಸರಕಾರದ ಆಡಳಿತದ ಗುರುತರ ಹೊಣೆಯನ್ನು ಚಾಣಾಕ್ಷತೆಯಿಂದ ನಿರ್ವಹಿಸಿಕೊಂಡು ಹೋಗಬೇಕಾದರೆ ಪ್ರಜೆಗಳು ಸುಶಿಕ್ಷಿತರಾಗಬೇಕು. ತಮ್ಮ ಸುತ್ತಲಿನ ಪ್ರಪಂಚದ ಪರಿಸ್ಥಿತಿಯನ್ನು ಚನ್ನಾಗಿ ಅರಿತುಕೊಳ್ಳಬೇಕು. ತಮ್ಮ ನಿತ್ಯ ಜೀವನವನ್ನು ಸುಂದರಗೊಳಿಸುವಲ್ಲಿ ಸಹಾಯಕವಾಗುವ ಸಮಾಜದ ರೀತಿ, ನೀತಿ, ಕಟ್ಟುಕಾಯುದೆಗಳನ್ನು ತಿಳಿದುಕೊಳ್ಳಬೇಕು. ಈ ಎಲ್ಲ 'ಬೇಕು' ಗಳನ್ನು ಒದಗಿಸಿಕೊಡುವ ಉತ್ತಮ ಸಂಸ್ಥೆಗಳೆಂದರೆ ಗ್ರಂಥಾಲಯುಗಳೇ.

ಇಂಗ್ಲಂಡ, ಅಮೇರಿಕಾ, ಜಪಾನ ಮುಂತಾದ ದೇಶಗಳು ಇಂದು ಬಹು ಮುಂದುವರಿದ ರಾಷ್ಟ್ರಗಳೆಂದು ಖ್ಯಾತಿ ಗಳಿಸಬೇಕಾದರೆ ಅಲ್ಲಿಯ ಗ್ರಂಥಾಲಯುಗಳು ಆ ಆ ಪ್ರಜೆಗಳ ಹೃದಯದಲ್ಲಿ ಬಿತ್ತಿದ ಅಚ್ಚಳಿಯುದ ದೇಶಾಭಿಮಾನವೇ ಮುಖ್ಯ ಕಾರಣವೆಂದು ಹೇಳಬಹುದು.

ಕನ್ನಡಿಗರಲ್ಲಿ ದೇಶಾಭಿಮಾನವು ಉಕ್ಕುವಂತೆ ಮಾಡಬೇ-ಕಾದರೆ ಗ್ರಂಥಾಲಯುಗಳು ಹಳ್ಳಿಯಿಂದ ನಗರದ ವರೆಗೆ ಇನ್ನೂ ವಿಪುಲವಾಗಿ ಹುಟ್ಟಿ ಬೆಳೆದು ಬರಬೇಕಾಗಿದೆ.

# ಅವಲೋಕಿಸಿದ ಗ್ರಂಥಗಳು

## ಕನ್ನಡ


೧. ಅನುಭವ ಮಂಟಪದ ಐತಿಹಾಸಿಕತೆ—
ಚನ್ನಪ್ಪ ಉತ್ತಂಗಿ

೨. ಭಾರತದಲ್ಲಿ ಗ್ರಂಥಾಲಯ ಪ್ರಸಾರ—
ಕೆ. ಎಸ್. ದೇಶಪಾಂಡೆ

೩. ಗ್ರಂಥಾಲಯ— ಎಚ್. ಎಸ್. ಪಾಟೀಲ ಮತ್ತು
ಶ್ರೀನಿವಾಸ ಪಾಟೀಲ

೪. ಪ್ರಜಾಪ್ರಭುತ್ವದಲ್ಲಿ ಸಮಾಜಶಿಕ್ಷಣ—
ಕೆ. ಎಸ್. ಸದಾಶಿವಯ್ಯ

೫. ಐವರು ಗ್ರಂಥಾಲಯ ವಿಜ್ಞಾನಿಗಳು—
ಎಸ್. ಆರ್. ಗುಂಜಾಳ

೬. ವಾಗ್ಭೂಷಣ ಪತ್ರಿಕೆ— ಸಂ. ೨೪

೭. ಅಖಿಲ ಕರ್ನಾಟಕ ಪುಸ್ತಕ ಭಂಡಾರಗಳ ಮೊದಲ
ನೆಯ ಸಮ್ಮೇಳನ ವರದಿ ೧೯೪೮

೮. ಕರ್ನಾಟಕ ಗ್ರಂಥಾಲಯ ಸಮ್ಮೇಳನದ ಕಾರ್ಯ
ಕಲಾಪಗಳು ಮತ್ತು ವರದಿ– ೧೯೫೧-೫೨

## ENGLISH


1) Bombay Karnatak Inscriptions Vol- 1-
2) Epigraphia Carnatica Vols. VII, VIII
3) Epigraphia Indica Vol. IV, XII, XII
4) Indian Antiquary Vols. VIII, X, XII, XVII
5) The Inscriptions of Nagai–Hyderabad, Archealogical Series No. 8, 1928
6) Promotion of Learning in India Unde Mahmmadon Rule– B. C. Law
7) Historical Sketches of the south of India Mark Wilks
8) Architecture at Bijapur– Fergussion
9) Bidar : its history and monuments– G. Yazdani
10) Report of the Library Developmen Committee Bombay: 1939–40-A.A. Fyze


## ARTICLES


1) Libraries in the Colleges affiliated to th Karnatak University– K. S. Deshpand Published in **The Journal of th Karnatak University** Vol. 4, June 19
2) Library Movement in the Mysore stat K. S. Deshpande. Published in th **Indian Librarian** Vol. 17, No. 1

೩೨. ಸಾರ್ವಜನಿಕ ಅಭಿಪ್ರಾಯ(ದ್ವಿಅ)–ಎನ್. ರಾಜಗೋಪಾಲರಾವ್

೩೩. ಕನ್ನಡ ಕಾವ್ಯಗಳಲ್ಲಿ ಕಿರಾತಾರ್ಜುನ ಪ್ರಸಂಗ –ದೇವೇಂದ್ರಕುಮಾರ ಹಕಾರಿ

೩೪. ಕನ್ನಡಕ್ಕೆ ಪುರಂದರದಾಸರು ನೀಡಿದ ಕೊಡುಗೆ (ದ್ವಿ. ಅ.) –ಜಿ. ಡಿ. ನಾಡಕರ್ಣಿ

೩೫. ಫ್ಯಾಶನ್ನುಗಳು (ದ್ವಿ. ಅ.) –ಕೆ. ಡಿ. ತಂಗೋಡ

೩೬. ಮಹಾಕವಿ ರಾಘವಾಂಕನ ಪಾತ್ರಗಳಲ್ಲಿ ತತ್ವನಿಷ್ಠೆ (ದ್ವಿ. ಅ.)- ಬಿ. ವ್ಹಿ. ಮಲ್ಲಾಪುರ

೩೭ ಅಭಿವೃದ್ಧಿ ಯೋಜನೆಗಳಲ್ಲಿ ಸಹಕಾರದ ಪಾತ್ರ (ದ್ವಿ. ಅ.) –ಎಸ್. ಜಿ. ಕರಭಂಟನಾಳ

೩೮. ಕನ್ನಡ ಜೈನ ಪುರಾಣಗಳು (ದ್ವಿ.ಅ.)–ಎಸ್. ಎನ್. ನಾಯಕ

೩೯. ಕನ್ನಡ ನಾಟ್ಯಸೃಷ್ಟಿ –ಎಚ್. ಜಿ. ಲೋಕೂರ

೪೦. ಹರಿಹರನು ಚಿತ್ರಿಸಿದ ಶಿವಶರಣೆಯರು (ದ್ವಿ.ಅ.)–ಬಿ. ಬಿ. ಹೆಂಡಿ

೪೧. ನೀವು ಬಯಸುವ ಮಗು ಗಂಡೊ? ಹೆಣ್ಣೊ? (ದ್ವಿ. ಅ.)-ಕೆ. ಆರ್. ರಾಮಸ್ವಾಮಿ

೪೨. ಅಂಡಯ್ಯ –ಬಿ. ಎಸ್. ಕುಲಕರ್ಣಿ

೪೩. ಬೆಳವಲನಾಡಿನ ಬೆಳೆಗಳು –ಎಸ್. ಎ. ಹೊಸಮನಿ

೪೪. ಜಾನಪದ ಕಥೆಗಳು (ದ್ವಿ. ಅ.) –ಎಲ್. ಆರ್. ಹೆಗಡೆ

೪೫. ಸುಧಾರಿಸಿದ ಬೇಸಾಯ –ಎ. ಸಿ. ಕಲ್ಯಾಣಿಮಠ

೪೬. ಕನ್ನಡನಾಡಿನ ಐತಿಹಾಸಿಕ ಮಹಾಪುರುಷರು –ಬಿ. ಆರ್. ಗೋಪಾಲ

೪೭. ಗ್ರಂಥಾಲಯದ ಅಂತರಂಗ –ಎಸ್. ಆರ್. ಗುಂಜಾಳ

೪೮. ಸ್ತ್ರೀ ಮತ್ತು ಶಿಕ್ಷಣ –ವನಮಾಲಾ ಆಚಾರ್

೪೯. ಜಾಗತಿಕ ಸರಕಾರ –ಸಿ. ವೀರಬಸಣ್ಣ

೫೦. ಸಮುದಾಯ ಸಂಘಟನೆ –ಎಚ್. ಎಂ. ಮರುಳಸಿದ್ಧಯ್ಯ

೫೧. ಅಶೋಕನ ಧರ್ಮಶಾಸನಗಳು –ಶ್ರೀನಿವಾಸ ರಿತ್ತಿ

೫೨. ಪ್ರಾಚೀನ ಭಾರತದ ರಾಜ್ಯಪದ್ಧತಿ (ದ್ವಿ. ಅ.) –ಸಿ. ವ್ಹಿ. ರಂಗಸ್ವಾಮಿ

೫೩. ಅಕ್ಕಮಹಾದೇವಿ ಮತ್ತು ಮೀರಾಬಾಯಿ –ಎಸ್. ಎಸ್. ಕಬ್ಬಿನ

೫೪. ಕನ್ನಡ ಕಾವ್ಯದಲ್ಲಿ ವೀರರಸ ನಿರೂಪಣೆ –ಬಿ. ಬಿ. ಮಹೀಶವಾಡಿ

೫೫. ಹರಿಹರ ಮಹಾಕವಿಯ ಕೆಲವು ಮಹೋನ್ನತ ವಿಚಾರಗಳು –ಬಿ. ಸಿ. ಜವಳಿ

೫೬. ಭಾರತ ರಾಜ್ಯಘಟನೆ –ಎಂ. ಎಸ್. ಪಾಟೀಲ

೫೭. ಪಂಚಾಯತಿ ರಾಜ್ಯ –ಎಸ್. ಜಿ. ಕರಭಂಟನಾಳ ಮತ್ತು ಕೆ. ಡಿ. ಬಸವ

೫೮. ವಿಷಮಜ್ವರ –ಪಿ. ಎಸ್. ಶಂಕರ

೫೯. ಪುಸ್ತಕ ಭಾಂಡಾರ ಕಾಯದೆ —ಜಿ. ಎಂ. ಪಾಟೀಲ

೬೦. ಸರ್ ಐಸಾಕ್ ನ್ಯೂಟನ್ —ಆರ್. ವ್ಹಿ. ಅಬ್ಬಿಗೇರಿ

೬೧. ಗ್ರಾಮಾಭ್ಯುದಯದ ಯೋಜನಾಂಗಗಳು —ಟಿ. ಕೆ. ಮೇಟಿ

೬೨. ಹರಿಜನರ ಸಮಸ್ಯೆಗಳು ಹಾಗು ಅವುಗಳ ಪರಿಹಾರ —ಎನ್. ಕೆ. ಕಡೆತೋಟದ

೬೩. ರಾಸಾಯನಿಕ ಕಿಣ್ವಗಳು —ಎಂ. ಎಸ್. ಎಸ್. ರಾವ್

೬೪. ಪ್ರಜಾಪ್ರಭುತ್ವದ ಮೂಲತತ್ವಗಳು —ಕೆ. ಬಿ. ಬಕ್ಕಪ್ಪ

೬೫. ಹೃದಯಾಘಾತ — ಪಿ. ಎಸ್. ಶಂಕರ

೬೬. ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ —ಡಿ. ಎ. ಚಿಕ್ಕಿ

೬೭. ಶ್ರೀ ರಾಮಾಯಣ ದರ್ಶನದಲ್ಲಿ ಕುವೆಂಪು ಸೃಜಿಸಿದ ಮೂರು ಪಾತ್ರಗಳು —ಎಂ. ಜಿ. ಬಿರಾದಾರ

೬೮. ಯೋಜನೆಗಳೇಕೆ ಬೇಕು? —ಎಸ್. ಎಸ್. ಯಮ್ಮಿ

೬೯. ನಗರನಾಡಿನ ಶಿವಶರಣರು —ವ್ಹಿ. ಶಿವಾನಂದ

೭೦. ವಿಜ್ಞಾನದ ದೃಷ್ಟಿಯಲ್ಲಿ ಸೃಷ್ಟಿ —ಆರ್. ಎಸ್. ಭೂಸನೂರಮಠ

೭೧. ವಿಜಯನಗರದ ನಿರ್ಣಾಯಕ ಯುದ್ಧ —ಎಸ್. ಬಿ. ಕೋಡದ

೭೨. ಬಸವಣ್ಣನವರನ್ನು ಕುರಿತ ಶಾಸನಗಳು—ಎಂ. ಎಂ. ಕಲಬುರ್ಗಿ

೭೩. ಆಧುನಿಕ ಭಾಷಾ ವಿಜ್ಞಾ —ಜಿ. ಎಸ್. ಕುಳ್ಳಿ

೭೪. ಪುರಾಣ ಜಿಜ್ಞಾಸೆ — ಎಲ್. ಆರ್. ಹೆಗಡೆ

೭೫. ಭಾರತದಲ್ಲಿ ಶೈಕ್ಷಣಿಕ ಪ್ರಯೋಗ —ವ್ಹಿ. ಎಸ್. ಕುಲಕರ್ಣಿ

೭೬. ಅಧಿಕ ಉತ್ಪಾದನೆಗಾಗಿ ಮಿಶ್ರತಳಿ ಬೆಳೆಗಳು —ಎ. ಸಿ. ಕಲ್ಯಾಣಿಮಠ

೭೭. ಕನ್ನಡ ನುಡಿಯ ಬೆಳವಣಿಗೆ —ಎಚ್. ಜಿ. ಲೋಕೂರ

೭೮. ಹರಿಹರನ ಗಿರಿಜಾಕಲ್ಯಾಣ —ಬಿ. ವ್ಹಿ. ಶಿರೂರ

೭೯. ಹೊಟ್ಟೆಯ ಹುಣ್ಣು —ಪಿ. ಎಸ್. ಶಂಕರ

೮೦. ಸಂಯೋಜಕ ಶಕ್ತಿ —ಬಿ. ಜಿ. ಜ್ಯೋತಿ

೮೧. ಸಂಸದೀಯ ಸರಕಾರ ಭಾರತಕ್ಕೆ ಒಪ್ಪುವದೇ? —ವಸಂತ ಪಾಟೀಲ

೮೨. ನಮ್ಮ ರೈತರೇಕೆ ಹಿಂದುಳಿದಿದ್ದಾರೆ? —ಎಂ. ಸಿ. ಕೊಡ್ಲಿ

೮೩. ನಗೆಗಾರ ನಯಸೇನ —ಎಂ. ಎಸ್. ಸುಂಕಾಪುರ

೮೪. ಶೂನ್ಯ ಸಂಪಾದನೆ —ವ್ಹಿ. ಎಸ್. ಕಂಬಿ

೮೫. ಮಹಮೂದ ಗವಾನ —ಎಲ್. ಆರ್. ಕುಲಕರ್ಣಿ

೮೬. ಕೆಳದಿಯ ನಾಯಕರು —ಜಿ. ಎಸ್. ದೀಕ್ಷಿತ

೮೭. ಮುಳುಗುಂದ ನಾಡು —ಎಸ್. ಎಚ್. ರಿತ್ತಿ

೮೮. ಶ್ವಾಸಕೋಶಕ್ಷಯ —ಪಿ. ಎಸ್. ಶಂಕರ

ಬೆಲೆ : ಪ್ರತಿ ಒಂದಕ್ಕೆ ೨೫ ಪೈಸೆ